" ಪ್ರತಿ ಬಾಲ್‌ನ್ನು ಎದುರಿಸುವ ಮೊದಲು ನಾನು ಶ್ಲೋಕಗಳನ್ನು ಗುಣುಗುಟ್ಟುತ್ತೇನೆಂಬ ಮಾತು ನಿಜ. ಪ್ರತಿ ದಿನವೂ ನಾನು ಮಾಲ್ಟೋವಾ ಕುಡಿಯುತ್ತೇನೆಂಬುದೂ ನಿಜ... ದಿನಕ್ಕೆರಡು ಬಾರಿ... ಬೌಲಿಂಗ್‌ನ ಮೇಲೆ ಆಕ್ರಮಣ ಮಾಡಲು ಬೇಕಾಗುವ ಶಕ್ತಿಗಾಗಿ !"

—ತನ್ನ ಆಕ್ರಮಣ ಕ್ರಮದ ವಿಚಾರದಲ್ಲಿ ಶ್ರೀಕಾಂತ ನೀಡಿದ ಹೇಳಿಕೆ.

ಒಂದು ಮಗ್ ರುಚಿಕರ ಸ್ವಾದದ ಮಾಲ್ಟೋವಾದೊಂದಿಗೆ ನನ್ನ ಮುಂಜಾನೆ ಆರಂಭವಾಗುತ್ತದೆ. ನನ್ನ ಆಕ್ರಮಣದ ಕ್ರಮದಲ್ಲಿ ಮಾಲ್ಟೋವಾಕ್ಕೆ ಮಹತ್ವದ ಸ್ಥಾನ. ಮಾಲ್ಟ್, ತಾಜಾ ಕೆನೆ ಹಾಲು, ರುಚಿಕರ ಕೋಕೋ ಮತ್ತು ಸಕ್ಕರೆಯ ಸಮ್ಮಿಲಿತ ಉತ್ತಮತೆ ಇರುವ ಒಂದೇ ಒಂದು ಪೇಯ— ಮಾಲ್ಟೋವಾ. ಆಡುತ್ತಿರಲಿ, ಇಲ್ಲದಿರಲಿ... ನನಗೆ ಬೇಕಾದ ಆರೋಗ್ಯ, ಶಕ್ತಿ ಮತ್ತು ಬಲಕ್ಕಾಗಿ ನನಗೆ ಬೇಕು ಮಾಲ್ಟೋವಾ. ದಿನಕ್ಕೆರಡು ಬಾರಿ ಮಾಲ್ಟೋವಾ ಕುಡಿದು, ಬೆಳೆದು ಚಾಂಪಿಯನ್ ಆಗಿರಿ.



ಹೊಸ

**ಮಾಲ್ಟೋವಾ**




**ಆರೋಗ್ಯ, ಬಲ ಮತ್ತು ಶಕ್ತಿಯ ವಿಜಯಿ ಸಂಯೋಜನೆ.**

FSA/JIL/2/85-KAN

# ಚಂದಮಾಮ

ಸಂಸ್ಥಾಪಕರು : 'ಚಕ್ರಪಾಣಿ'
ಸಂಚಾಲಕರು : ನಾಗಿರೆಡ್ಡಿ

ಒಂದೇ ರಾಜ್ಯದಲ್ಲಿ, ಒಂದೇ ಊರಿನಲ್ಲಿ, ಒಂದೇ ಮನೆಯಲ್ಲಿ ಒಂದೇ ತಾಯಿಯಲ್ಲಿ ಹುಟ್ಟಿದವರೆಲ್ಲರೂ ಒಂದೇ ವಿಧದವರಾಗಿರುವುದಿಲ್ಲ. ಎಲ್ಲರಿಗೂ ಮನುಷ್ಯರೆಂದು ಹೆಸರಿದ್ದರೂ ಮನುಷ್ಯರ ಪ್ರವರ್ತನೆ, ಅದರಿಂದಾಗುವ ಒಳಿತು ಕೆಡುಕು ಪರಿಣಾಮಗಳು ಒಂದೇ ವಿಧವಾಗಿರುವುದಿಲ್ಲ. ಒಂದೇ ಬಗೆಯ ವಾತಾವರಣದಲ್ಲಿ ಬೆಳೆದವರಲ್ಲಿ ಕೆಲವರು ಒಳ್ಳೆಯವರೆನಿಸಿದರೆ ಕೆಲವರು ಕೆಟ್ಟವರೆನಿಸಿಕೊಳ್ಳುತ್ತಾರೆ. ಇದರ ಸತ್ಯತೆಯನ್ನು ಈ ಸಂಚಿಕೆಯ "ಪತನ" ಎಂಬ ಕಥೆಯಲ್ಲಿ ನೋಡಬಹುದು.

## ಅಮರವಾಣಿ

ಉದ್ಧರತ್ಯುತ್ತಮೋ ವಂಶಂ ಮಧ್ಯಮಃ ಸಮುಪಕ್ಷತೇ
ಅಧಮಸ್ತು ಕುಲೇ ಜಾತಃ ನಾಶಯತ್ಯ ಖಿಲಂ ಕುಲಮ್

ಉತ್ತಮನು ತನ್ನ ವಂಶವನ್ನು ವೃದ್ಧಿಗೆ ತರುತ್ತಾನೆ, ಮಧ್ಯಮನು ತನ್ನ ವಂಶವನ್ನು ಉಪೇಕ್ಷಿಸುವನು; ಅಧಮನು ತನ್ನ ವಂಶವನ್ನು ನಾಶಪಡಿಸುವನು.

ಸಂಪುಟ : ೬೬ ಜನವರಿ '೮೬ ಸಂಚಿಕೆ : ೧
ಬಿಡಿ ಪ್ರತಿ ರೂ. ೨-೫೦ : : ವಾರ್ಷಿಕ ಚಂದಾ ರೂ. ೩೦-೦೦



# ಚಂದಮಾಮನ ಹರಟೆ



## ಫ್ಲೈಯಿಂಗ್ ಸಾಸರ್ಸ್

ಗ್ರಹಾಂತರಗಳಿಂದ ಫ್ಲೈಯಿಂಗ್ ಸಾಸರ್ಸ್ ಎಂಬ ಹಾರುವ ವಸ್ತುಗಳು ನಿಜಕ್ಕೂ ಭೂಮಿಯನ್ನು ಸಮೀಪಿಸುತ್ತಿವೆಯೆ ? ಎಂದರೆ ಇದಮಿತ್ಥವೆಂದು ಹೇಳುವಂತಿಲ್ಲ. ಆದರೂ ಅಮೆರಿಕಾಕ್ಕೆ ಸೇರಿದ ಎಲ್ಲೆನ್ ಕ್ರಿಸ್ಮಲ್ ಎಂಬ ವನಿತೆ ಇಂತಹ ಹಾರುವ ವಸ್ತುಗಳನ್ನು ಆಗಾಗ ನೋಡುತ್ತಿರುವುದಾಗಿ ಹೇಳುತ್ತಾಳೆ. ಈ ವಸ್ತುಗಳ ಅಂಚುಗಳು ಲೋಹಪೂರಿತಗಳೆಂದೂ, ಅವು ತಮ್ಮ ಸುತ್ತಲೂ ಮೇಘಗಳನ್ನು ಸೃಷ್ಟಿಸಿಕೊಳ್ಳುತ್ತವೆಂದೂ ಅದ್ದರಿಂದಲೇ ಅವುಗಳನ್ನು ಫೋಟೋ ತೆಗೆಯಲು ಸಾಧ್ಯವಾಗುವುದಿಲ್ಲವೆಂದೂ ಅವಳು ಹೇಳುವಳು.

## ಸೌರಶಕ್ತಿಯಿಂದ ನಡೆಯುವ ದೋಣಿ !



ಜಪಾನಿಗೆ ಸೇರಿದ ಕೆನಿಚ್ ಹೋರೀ ಎಂಬ ನಾವಿಕನು ಮೊತ್ತಮೊದಲನೇ ಸಾರಿಯಾಗಿ ಸೌರಶಕ್ತಿಯಿಂದ ನಡೆಯುವ ದೋಣಿಯಲ್ಲಿ ಪೆಸಿಫಿಕ್ ಸಮುದ್ರವನ್ನು ದಾಟಿದನು. ಅವನು ಹೊನೊಲುಲೂವಿಂದ ೬೨೦೦ ಕಿ. ಮೀ. ದೂರದಲ್ಲಿರುವ ಚಿ ಚಿ ಜಿ ಮಾ ದ್ವೀ ಪ ವ ನ್ನು ಸೇರಲು ಎಪ್ಪತ್ತೈದು ದಿನಗಳಾದುವು !



## ಏಷ್ಯಾ ಖಂಡದೊಳಗೇ ದೊಡ್ಡ ಸೇತುವೆ

ಏಷ್ಯಾ ಖಂಡದಲ್ಲೇ ದೊಡ್ಡದಾಗಿ, ಪ್ರಪಂಚದಲ್ಲಿ ಮೂರನೆಯದಾಗಿರುವ ಸೇತುವೆ ಇತ್ತೀಚೆಗೆ ಮಲೇಷಿಯಾದಲ್ಲಿ ನಿರ್ಮಿಸಲ್ಪಟ್ಟಿದೆ. ೧೩.೫ ಕಿ. ಮೀ. ಉದ್ದವಾದ ಈ ಸೇತುವೆ ಉತ್ತರ ಪೆನಾಂಗ್ ರಾಷ್ಟ್ರವನ್ನು ಪ್ರಧಾನ ಭೂಮಿಯೊಂದಿಗೆ ಕೂಡಿಸುತ್ತದೆ.

## ನಿಮಗೆ ಗೊತ್ತೇ?

೧. ಪ್ರಪಂಚದೊಳಗೆಲ್ಲಾ ಅತಿ ದೊಡ್ಡದಾದ ಬುದ್ಧ ವಿಗ್ರಹ ಎಲ್ಲಿದೆ ?

೨. ಬುದ್ಧನ ದಂತವನ್ನು ಭದ್ರಪಡಿಸಿದ ಆಲಯವು ಎಲ್ಲಿರುವುದೆಂದು ನಿಮಗೆ ತಿಳಿದಿದೆಯೇ ?

೩. ಭೂಮಿ ಸೂರ್ಯನ ಸುತ್ತಲೂ ತಿರುಗುತ್ತಿದೆ ಎಂಬ ಸಿದ್ಧಾಂತವನ್ನು ಹೊರಡಿಸಿದುದಕ್ಕೆ ಅ ಪ ರಾ ಧಿ ಯೆ ನಿ ಸ ಲ್ಪ ಟ್ಟ ಶಾಸ್ತ್ರವೇತ್ತನು ಯಾರೆಂದು ನಿಮಗೆ ಗೊತ್ತೆ ?

೪. ವಿಲಿಯಂ ವಿಲ್‌ಬರ್‌ಸೋರ್ಸ್ ಎಂಬ ಮಾನವತಾವಾದಿ ಯಾವುದಕ್ಕಾಗಿ ಕೆಲಸ ಮಾಡಿದನೆಂದು ನೀವು ಹೇಳಬಲ್ಲಿರಾ ?

೫. ಏಷ್ಯಾ ಖಂಡದಲ್ಲಿ ಕ್ರೈಸ್ತವರು ಅಧಿಕ ಸಂಖ್ಯೆಯಲ್ಲಿ ವಾಸಮಾಡುವ ದೇಶ ಯಾವುದು ?

(ಉತ್ತರ ೬೫ ನೇ ಪುಟದಲ್ಲಿ)

**ಪುರಾಣ ಗಾಥಾವಳಿ :**

# ಅಂಗಾರಕ

ಹಿಂದೆ ಒಂದು ಕಾಲದಲ್ಲಿ ಅಂಗಾರಕನೆಂಬ ರಾಕ್ಷಸನು ವಿವಿಧ ರಾಜ್ಯಗಳ ರಾಜಭವನದೊಳಗೆ ಹೊಕ್ಕು ಎಷ್ಟೋ ರಾಜಕುಮಾರಿಯರನ್ನು ಎತ್ತಿಕೊಂಡು ಹೋಗಿ ಅರಣ್ಯ ಮಧ್ಯದ ಒಂದು ಗುಹೆಯೊಳಗೆ ಬಂಧಿಸುತ್ತಿದ್ದನು.

ಅದನ್ನು ತಿಳಿದು ಉಜ್ಜಯಿನಿಯ ಯುವರಾಜನಾದ ಮಹಾಸೇನನು ಪರಾಶಕ್ತಿಯನ್ನು ಕುರಿತು ಘೋರವಾದ ತಪಸ್ಸನ್ನು ಮಾಡಿ, ಒಂದು ಖಡ್ಗವನ್ನು ದೇವಿಯ ವರಪ್ರಸಾದವಾಗಿ ಪಡೆದನು.

ಒಂದು ದಿನ ಮಹಾಸೇನನು ಬೇಟೆಗಾಗಿ ಅಡವಿಗೆ ಹೋಗುತ್ತಿರಲು, ದೊಡ್ಡದೊಂದು ಕರಡಿ ಅವನಿಗೆ ಇದಿರಾಯಿತು. ಅದು ಅವನ ರಥವನ್ನು ತಲೆಕೆಳಗಾಗುವಂತೆ ದೂಡಿತು. ಅತ್ಯಾಶ್ಚರ್ಯಪಡುತ್ತ ರಥದಿಂದ ಕೆಳಗೆ ಹಾರಿದ ಮಹಾಸೇನನು ಆ ಕರಡಿಯ ಮೇಲೆ ಬಾಣಗಳನ್ನು ಪ್ರಯೋಗಿಸಿದನು. ಒಂದು ಬಾಣವೂ ಕರಡಿಯನ್ನು ಗಾಯಪಡಿಸಲಿಲ್ಲ.

ಆದರೆ ಅದು ಅವನ ಇದಿರು ನಿಲ್ಲದೆ ಕಾಡಿನೊಳಗೆ ಓಡಿಹೋಯಿತು.

ಮಹಾಸೇನನು ಅದನ್ನು ಕಾಡಿನೊಳಗೆಲ್ಲಾ ಹುಡುಕುತ್ತ, ಸಾಯಂಕಾಲದ ಹೊತ್ತಿಗೆ ಒಂದು ಗುಹೆಯನ್ನು ಸಮೀಪಿಸಿ, ಗುಹೆಯೊಳಗಿನಿಂದ ಮಾತುಗಳು ಹೊರಡುವುದನ್ನು ಕೇಳಿ ಅಲ್ಲಿ ನಿಂತನು.

"ಅಪ್ಪಾ, ನೀವು ಕರಡಿ ರೂಪದಲ್ಲಿರುವವರೆಗೂ ನಿಮಗೆ ಯಾರಿಂದಲೂ ಎಂತಹ ಕೇಡೂ ಬರುವುದಿಲ್ಲ. ನೀವು ನಿಜರೂಪದಲ್ಲಿರುವಾಗ ಅಪಾಯ ಬಂದರೆ ಹೇಗೆ ತಪ್ಪಿಸಿಕೊಳ್ಳುವಿರಿ ? " ಎಂದು ಒಂದು ಸ್ತ್ರೀಯ ಕಂಠಸ್ವರವು ಕೇಳಿಸಿತು.

"ನಿನಗೆ ಅಂತಹ ಅನುಮಾನವೇ ಬೇಡ. ನಿನ್ನ ತಂದೆಯನ್ನು ಯಾವ ಆಯುಧವೂ ಏನೂ ಮಾಡಲಾರದು. ನನ್ನದು ವಜ್ರಶರೀರ. ಎಡಗೈ ಮಾತ್ರ ಭೇದಿಸಲ್ಪಡುವಂತಹದು. ಅದಕ್ಕೇ ಆ ಕೈಗೆ ರತ್ನಕವಚ ಧರಿಸಿದ್ದೇನೆ " ಎಂದನು ಅಂಗಾರಕ.

ಈ ಮೊದಲು ತನ್ನ ರಥವನ್ನು ಮಗುಚಿ ಹಾಕಿದ ಕರಡಿ ಅಂಗಾರಕನೇ ಎಂದು ಮಹಾಸೇನನಿಗೆ ತಿಳಿಯಿತು. ಬೆಳಗಾಗುವರೆಗೂ ಅಲ್ಲೇ ಇದ್ದು, ಅಂಗಾರಕನು ಗುಹೆಯಿಂದ ಹೊರಗೆಬಂದ ಕೂಡಲೇ ಅವನನ್ನು ಇದಿರಿಸಿ, ದಿವ್ಯ ಖಡ್ಗದಿಂದ ಅವನ ಎಡಗೈಯನ್ನು ಕಡಿದನು ಮಹಾಸೇನ. ಮರುಕ್ಷಣದಲ್ಲಿ ಆ ರಾಕ್ಷಸನು ಬಿದ್ದು ಕದಲಲಾಗದೆ ಸತ್ತನು.

ಆಮೇಲೆ ಮಹಾಸೇನನು, ಸೆರೆಯಲ್ಲಿದ್ದ ರಾಜಕುಮಾರಿಯರೆಲ್ಲರನ್ನೂ, ಬಿಡಿಸಿ, ಸೌಂದರ್ಯದ ರಾಶಿಯಾದ ಅಂಗಾರಕನ ಕುಮಾರಿಯನ್ನು ವಿವಾಹಮಾಡಿಕೊಂಡನು. ತನ್ನ ಕುಮಾರಿಗೆ ಸೇವೆಮಾಡಿಸಲಿಕ್ಕೇ ಆ ರಾಜಕುಮಾರಿಯರನ್ನು ಅಂಗಾರಕನು ತಂದುದಂತೆ.





# ಪತನ

ಒಂದಾನೊಂದು ಕಾಲದಲ್ಲಿ ಆರಾವಳೀ ಪರ್ವತ ಪ್ರಾಂತದ ಒಂದು ವನದಲ್ಲಿ ಕೃಷ್ಣಚಂದ್ರನೆಂಬೊಬ್ಬ ಪಂಡಿತನು ಒಂದು ಗುರುಕುಲವನ್ನು ಸ್ಥಾಪಿಸಿ ನಡೆಸಿಕೊಂಡಿದ್ದನು. ಅವನು ಅತ್ಯುತ್ತಮನಾದ ವಿದ್ಯಾಬೋಧಕನೆಂದು ದೇಶಗಳೊಳಗೆಲ್ಲಾ ಹೆಸರು ಪಡೆದವನಾಗಿದ್ದನು. ನಿಜಕ್ಕೂ ಅವನು ಬಹಳ ಉದಾರ ಹೃದಯದವನು. ಅವನ ಹತ್ತಿರ ಶಿಷ್ಯರಾಗಿ ವಿದ್ಯೆ ಕಲಿಯಲು ಸುತ್ತಲಿರುವ ಬೇರೆ ಬೇರೆ ದೇಶಗಳಿಂದಲೂ ವಿದ್ಯಾರ್ಥಿಗಳು ಬರುತ್ತಿದ್ದರು. ಕಲಿತು ವಿದ್ವಾಂಸರಾಗಿ ಹೋಗುತ್ತಿದ್ದರು.

ಒಂದು ದಿನ ಸಾಯಂಕಾಲ ಗುರುಕುಲದ ಸಮೀಪವಿದ್ದೊಂದು ಮರದ ಹತ್ತಿರ ಏನೋ ಕಲಕಲರವವು ಕೇಳಿಸಿತು. ಕೃಷ್ಣಚಂದ್ರನು ಅಲ್ಲಿಗೆ ಹೋಗಿ ನೋಡಿದನು. ಅಲ್ಲಿ ಒಬ್ಬ ವಿದ್ಯಾರ್ಥಿಯನ್ನು ಬೇರೆ ನಾಲ್ವರು ವಿದ್ಯಾರ್ಥಿಗಳು ಹಿಡಿದು ಏನೋ ದಂಡಿಸುವಂತೆ ಕಂಡಿತು. ಕೃಷ್ಣಚಂದ್ರನು ಏನು ಸಂಗತಿಯೆಂದು ಅವರನ್ನು ಕೇಳಿದನು.

ಆಗ ಒಬ್ಬ ವಿದ್ಯಾರ್ಥಿಯು ಮುಂದೆ ಬಂದು, "ಸ್ವಾಮಿ, ನಾವು ಭದ್ರಪಡಿಸಿಕೊಂಡಿದ್ದ ಮಾವಿನ ಹಣ್ಣುಗಳನ್ನು ಇವನು ದಿನಾ ಕಳ್ಳತನ ಮಾಡಿ ತಿನ್ನುತ್ತಾನೆ. ಕೇಳಿದರೆ ಕೊಡುತ್ತೇವೆಂದರೂ ಇವನು ಕದಿಯುವುದನ್ನು ಬಿಡಲಿಲ್ಲ. ಬೇರೆ ಚಿಕ್ಕ ಚಿಕ್ಕ ಕಳವು ಕೂಡಾ ಮಾಡುತ್ತಾನೆ. ಈ ದಿನ ಹಾಗೆ ಮಾಡುವಾಗ ಸಿಕ್ಕಿಬಿದ್ದನು" ಎಂದರು.

ಕೃಷ್ಣಚಂದ್ರನು ದೋಷಿಯೆನಿಸಲ್ಪಟ್ಟ ವಿದ್ಯಾರ್ಥಿಯನ್ನು ನೋಡಿದನು. ಅವನು ತಪ್ಪು ಮಾಡಿದವನಂತೆ ತಲೆಬಾಗಿ ನೆಲವನ್ನು ನೋಡುತ್ತಾ ಸುಮ್ಮನಿದ್ದನು.

"ಎಲ್ಲರೂ ನನ್ನ ಹಿಂದೆ ಬನ್ನಿರಿ" ಎಂದು ಕೃಷ್ಣಚಂದ್ರನು ಅಲ್ಲಿಂದ ಹಿಂದಿರುಗಿದನು. ಎಲ್ಲರೂ ಬಂದು ಪಾಠಶಾಲೆಯಲ್ಲಿ ಕುಳಿತ ಮೇಲೆ, ಕೃಷ್ಣಚಂದ್ರನು ಎಲ್ಲರನ್ನೂ ನೋಡಿ ಹೀಗೆಂದನು: "ಪ್ರಕೃತಿಯಲ್ಲಿ ಅತಿ ಚಂಚಲವಾಗಿರುವಂತಹುದು ನೀರು. ಯಾವುದೇ ಪುಟ್ಟ ಸಂದು ದೊರಕಿದರೂ ನೀರು ಕೆಳಗೆ ಮುಖಮಾಡಿ ಪ್ರವಹಿಸಲಿಕ್ಕೇ ನೋಡುತ್ತದೆ. ಪತನವೆಂಬುದು ನೀರಿನ ಹಾಗಿನದು, ಮನುಷ್ಯನು ಸ್ವಲ್ಪಮಾತ್ರ ಬಲಹೀನನಾದನೆಂದರೆ ಮನಸ್ಸು ಪತನದ ಕಡೆಗೇ ವಾಲಿಕೊಳ್ಳುತ್ತದೆ.

"ಶಿವ"



ಆ ನೀರಿನ ಒತ್ತಡದಿಂದ ಪಾತ್ರವೇ ಮಾಲಿ ಹೋಗುತ್ತದೆ ಒಂದು ಸಾರಿ ಪತನವು ಪ್ರಾರಂಭವಾಯಿತೆಂದರೆ ಮತ್ತೆ ಸರ್ವನಾಶವಾಗಲು ಬಹಳ ಹೊತ್ತೇನಿಲ್ಲ. ಇದಕ್ಕೆ ಉದಾಹರಣೆಯಾಗಿ ನಿಮಗೆ ಶಾಮನೆಂಬ ಹುಡುಗನ ವೃತ್ತಾಂತವನ್ನು ಹೇಳುತ್ತೇನೆ. ಮನಸ್ಸು ಕೊಟ್ಟು ಕೇಳಿರಿ.

ಶಾಮನು ಸ್ವತಃ ಒಳ್ಳೆಯ ಬುದ್ಧಿವಂತನಾಗಿರುವವನು. ಆದರೆ ಕೆಟ್ಟವರ ಸಹವಾಸದಿಂದಾಗಿ ಯಾವ ಕೆಲಸಕ್ಕೂ ಉಪಯೋಗವಿಲ್ಲದವನಾಗಿ ತಯಾರಾದನು. ತಂದೆತಾಯಿಯರೂ ಬೇರೆಯವರೂ ಮಾಡುವ ಬೋಧನೆಗಳು ಅವನ ಕಿವಿಗಳಿಗೆ ಕಂಟಕಗಳಂತೆ ಆದುವು. ವಿದ್ಯೆ ಕಲಿಯುವುದನ್ನು ಬಿಟ್ಟು ಕೆಟ್ಟ ಚಾಳಿಯ ಸ್ನೇಹಿತರೊಂದಿಗೆ ಸೇರಿ ಪೋಲಿಯಾಗಿ ತಿರುಗಿಕೊಂಡಿದ್ದನು. ಪೋಲಿಗಳ ಜತೆ ಸೇರಿದುದರಿಂದ ಅವನೂ ಪೋಲಿಯಾಗಿ, ಪೋಲಿ ಖರ್ಚುಗಳು ಹೆಚ್ಚಾಯಿತು. ಅದರಿಂದಾಗಿ ಮೆಲ್ಲಮೆಲ್ಲನೆ ಅವನಿಗೆ ಚಿಲ್ಲರೆ ಕಳ್ಳತನಗಳಲ್ಲಿ ಕೂಡಾ ಅಭ್ಯಾಸವಾಗಿ ಕಳ್ಳನೇ ಆದನು.

ಶಾಮನಿರುವ ರಾಜ್ಯದ ರಾಜನು ಬಹುಶ್ರದ್ಧೆಯುಳ್ಳ ದೇವಿಭಕ್ತನಾಗಿದ್ದನು. ಆ ರಾಜನು ಬಹಳ ಧನವ್ಯಯದಿಂದ ಒಂದು ಆಲಯವನ್ನು ಕಟ್ಟಿಸಿದನು. ಆ ದೇವಿಯ ಆಲಯವನ್ನು ಹಾಲುಗಲ್ಲಿನಿಂದಲೇ ಕಟ್ಟಲಾಗಿತ್ತು. ದೇವಿಯ ವಿಗ್ರಹಕ್ಕಾಗಿ ಅನೇಕ ಬಗೆಯ ಆಭರಣಗಳನ್ನು ಮಾಡಿಸಿದನು. ಅವುಗಳಲ್ಲೆಲ್ಲಾ ನವರತ್ನ ಹಾರವೊಂದು ಎಲ್ಲಕ್ಕಿಂತ ಹೆಚ್ಚು ಬೆಲೆಯುಳ್ಳದ್ದಾಗಿತ್ತು.

ಕಾರಣವೇನೆಂದರೆ, ಅದಕ್ಕೊಂದು ಅಮೂಲ್ಯವಾದ ವಜ್ರವನ್ನೂ ಹೊದಿಸಲಾಗಿತ್ತು. ಅದು ಕೋಟಿ ವರಹಗಳಷ್ಟು ಬೆಲೆಯುಳ್ಳದ್ದೆಂದೂ, ಅದಿರುವ ಪ್ರದೇಶದಲ್ಲಿ ಸಕಲ ಶುಭಗಳೂ ನೆಲೆಯಾಗಿರುತ್ತವೆಂದೂ ಎಲ್ಲರೂ ಹೇಳುತ್ತಿದ್ದರು.

ಆ ದೇವಿಗೆ ಪ್ರತಿ ವರ್ಷ ಒಂಬತ್ತು ದಿನಗಳವರೆಗೆ ಉತ್ಸವ ನಡೆಯುತ್ತಿತ್ತು. ಆ ಉತ್ಸವವನ್ನು ನೋಡಲು ಆ ದೇಶದವರು ಮಾತ್ರವಲ್ಲದೆ ನೆರೆ ದೇಶಗಳಿಂದಲೂ ಪ್ರಜೆಗಳೂ, ಮುಖ್ಯಾಧಿಕಾರಿಗಳೂ, ರಾಜರೂ ಸಹ ಬರುತ್ತಿದ್ದರು. ಹಾಗೆ ಒಂದು ಸಾರಿ ಆ ಉತ್ಸವಕ್ಕೆ ಬಂದ ನೆರೆ ದೇಶದ ರಾಜ ಕಾಲನಾಥನಿಗೆ ದೇವಿಯ ವಕ್ಷಸ್ಥಳದಲ್ಲಿ ಕಾಂತಿಯನ್ನು ಬೀರುವ ನವರತ್ನ ಹಾರವು ಕಂಡಿತು. ಆ ಹಾರದಲ್ಲಿರುವ ವಜ್ರದ ಬೆಲೆ ಕೂಡಾ ಅವನಿಗೆ ತಿಳಿಯಿತು. ಅಂತಹುದು ತನ್ನ ಬಳಿಯಲ್ಲಿಲ್ಲದಿರುವುದು ಅವನಿಗೆ ದೊಡ್ಡ ಕೊರತೆಯಾಗಿ ತೋರಿತು. ದುಷ್ಟ ಹುಳು ಹೊಕ್ಕಿತು ಅವನ ಮನಸ್ಸಿನಲ್ಲಿ. ಕೇಳಬೇಕೆ ?

ಉತ್ಸವ ಮುಗಿದ ಮೇಲೆ ಕಾಲನಾಥನು ತನ್ನ ದೇಶಕ್ಕೆ ಹೊರಟುಹೋದನು. ಕೆಲವು ದಿನಗಳ ಮೇಲೆ ಆ ರಾಜನು ಆ ದೇವಿಯ ಹಾರವನ್ನು

ಅಪಹರಿಸಿ ತರುವಂತೆ ತನ್ನ ಮುಖ್ಯ ಚಾರರಲ್ಲಿ ವಿಶ್ವಾಸದವನಾದ ಒಬ್ಬನನ್ನು ಆರಿಸಿ ಕಳುಹಿಸಿದನು. ಕಾಲನಾಥನು ತೋರಿಸಿದ ಬಹುಮಾನಗಳ ಆಶೆಗೆ ಆ ಚಾರನ ಮನಸ್ಸು ಬಾಗಿಹೋಯಿತು. ಅವನು ದೇವಿಯ ಆಲಯಕ್ಕೆ ಬಂದು ಅಲ್ಲಿಯ ಪೂಜಾರಿಯನ್ನು ಕಲೆತುಕೊಂಡನು. ಆಗ ಆ ಚಾರನು ತೋರಿಸಿದ ಎರೆಗೆ ಆ ಪೂಜಾರಿ ಕೂಡಾ ವಶನಾಗಿಬಿಟ್ಟನು.

ಇಬ್ಬರೂ ಕೂಡಿ ಮರುದಿನ ರಾತ್ರಿ ದೇವಿಯ ಹಾರವನ್ನು ಅಪಹರಿಸಲು ನಿಶ್ಚಯಿಸಿದರು. ಸರಿಯಾಗಿ ಅದೇ ದಿನ ರಾತ್ರಿ ಶಾಮನು ತನ್ನ ಸ್ನೇಹಿತರೊಂದಿಗೆ ಕಂಡಕಂಡಲ್ಲಿ ತಿರುಗಾಡಿ ತನ್ನ ಮನೆಗೆ ಬರುತ್ತ, ಬಾಯಾರಿಕೆ ತೀರಿಸಿಕೊಳ್ಳಲಿಕ್ಕಾಗಿ ಆ ಆಲಯದ ಹತ್ತಿರವಿದ್ದ ಕೆರೆಯ ದಂಡೆಯಲ್ಲಿ ನಿಂತನು. ಆಗ ಅವನ ಇದಿರಿನಲ್ಲಿ ತುಸುದೂರ ಪೂಜಾರಿಯೂ, ಚಾರನೂ ಬರುವುದನ್ನು ನೋಡಿದನು. ಇಷ್ಟೊಂದು ಅರ್ಧರಾತ್ರಿಯ ಹೊತ್ತಿನಲ್ಲಿ ಪೂಜಾರಿ, ಯಾವನೊಂದಿಗೋ ಕಳ್ಳರ ಹಾಗೆ ಅಡಗಿಕೊಂಡು ಆಲಯಕ್ಕೆ ಏಕೆ ಬರುವನೋ ಎಂದು ಕುತೂಹಲವೆದ್ದಿತು ಶಾಮನಿಗೆ. ಅವನನ್ನು ಅವರು ನೋಡಲಿಲ್ಲ.

ಬರುವವರಿಬ್ಬರೂ ಆಲಯದ ಕಡೆಗೆ ತಿರುಗುವುದನ್ನು ನೋಡಿ, ಶಾಮನು ಪೂಜಾರಿಗಿಂತ ಮೊದಲೇ ಆಲಯದೊಳಗೆ ಹೊಕ್ಕು ಗರ್ಭಗುಡಿಯ ಹತ್ತಿರ ಕತ್ತಲೆಯಲ್ಲಿ ಅಡಗಿ ಕುಳಿತನು.

ಸ್ವಲ್ಪ ಹೊತ್ತಿಗೆ ಪೂಜಾರಿಯೊಬ್ಬನೇ ಅಲ್ಲಿಗೆ ಬಂದು ಗರ್ಭಗುಡಿಯ ಬೀಗ ತೆಗೆದು ಬಾಗಿಲು ತೆರೆದು ಒಳಗೆ ಪ್ರವೇಶಿಸಿದನು.

ಸ್ವಲ್ಪ ಹೊತ್ತು ತಾಳಿ ಶಾಮನು ಕೂಡಾ ಗರ್ಭಗುಡಿಯೊಳಗೆ ಹೊಕ್ಕು ಪೂಜಾರಿಯ ಹಿಂದೆಯೇ ನಿಂತು, "ಏನು ಮಾಡುವಿರಿ ಪೂಜಾರಿಗಳೆ?" ಎಂದು ಮೆಲ್ಲನೆ ಕೇಳಿದನು.

ಊಹಿಸದಿದ್ದ ಈ ಘಟನೆಯಿಂದ ಪೂಜಾರಿ ಗಾಬರಿಯಾಗಿ ನಡುಗಿದನು. ಭೀತಿಯಿಂದ ಕಕ್ಕಾಬಿಕ್ಕಿಯಾಗಿದ್ದ ಅವನ ಕೈಯಲ್ಲಿದ್ದ ಹಾರವು ಕೆಳಗೆ ಬಿದ್ದಿತು.





ಶಾಮನು ಬಗ್ಗಿ ಹಾರವನ್ನು ಎತ್ತಿಕೊಂಡು, "ಹೆದರಬೇಡಿ. ಈ ಹಾರವನ್ನು ಮಾರಬೇಕೆಂದು ಮಾಡಿದ್ದೀರಿ, ಹೌದಾ? ನಿಮ್ಮೊಂದಿಗೆ ಬಂದನಲ್ಲಾ ಇನ್ನೊಬ್ಬ? ಅವನು ಯಾರು?" ಎಂದು ಕೇಳಿದನು.

ಪೂಜಾರಿ ಧೈರ್ಯ ತಂದುಕೊಂಡು, ನಡುಗುವ ಮೆಲ್ಲನಿಯಲ್ಲಿ ವಿವರಗಳನ್ನು ಅವನಿಗೆ ಹೇಳಿದನು. ಶಾಮನು ಹಾರವನ್ನು ಪರೀಕ್ಷಿಸಿ ನೋಡುತ್ತಾ, "ಯಾವನೋ ಪರದೇಶದವನಿಗೆ ಇದನ್ನು ಕೊಟ್ಟು, ಸ್ವಲ್ಪ ಧನ ತೆಗೆದುಕೊಳ್ಳುವುದಕ್ಕಿಂತ ನಾವೇ ಇದನ್ನು ಉಪಯೋಗಿಸಿಕೊಳ್ಳುವುದು ಒಳ್ಳೇದಲ್ಲವೇ?" ಎಂದನು.

ಆ ಮಾತಿಗೆ ಪೂಜಾರಿ ಸಂತೋಷದಿಂದ ಒಪ್ಪಿದನು. ಕೂಡಲೇ ಅವರಿಬ್ಬರೂ ಹಾರವನ್ನು ತೆಗೆದುಕೊಂಡು, ಗರ್ಭಗುಡಿಯ ಬಾಗಿಲನ್ನು ಮೊದಲಿನಂತೆ ಬೀಗ ಹಾಕಿ, ನಿಃಶಬ್ದವಾಗಿ ಹೊರಗೆ ಬಂದು, ಅಲ್ಲಿ ಕಾವಲಾಗಿ ಕುಳಿತಿದ್ದ ಚಾರನ ತಲೆಯ ಮೇಲೆ ಕಬ್ಬಿಣದ ಗೂಟದಿಂದ ಬಲವಾಗಿ ಹೊಡೆದರು. ಅವನ ಬಾಯಿಯಿಂದ ಯಾವ ಶಬ್ದವೂ ಹೊರಡದೆ, ಕುಳಿತಲ್ಲೇ ಬಿದ್ದನು. ಇಬ್ಬರೂ ಗರ್ಭಗುಡಿಯ ಬೀಗದ ಕೈಯನ್ನು ಅವನ ಪಕ್ಕದಲ್ಲಿ ಹಾಕಿ ಹೊರಗೆ ಹೋಗಿ ಊರಿನ ಹೊರ ಭಾಗಕ್ಕೆ ನಡೆದರು.

ಹಾಗೆ ನಡೆಯುವಾಗ ಇಬ್ಬರ ಮನಸ್ಸಿನಲ್ಲಿಯೂ ಆ ಹಾರವನ್ನು ಪೂರ್ತಿ ತಮ್ಮದಾಗಿ ಮಾಡಿಕೊಳ್ಳಬೇಕೆಂಬ ಆಲೋಚನೆ ಬಂತು. ಹೋಗಿ ಹೋಗಿ ಮರುದಿನ ಮಧ್ಯಾಹ್ನದ ಹೊತ್ತಿಗೆ ಅವರಿಬ್ಬರೂ ಒಂದು ಕಾಡನ್ನು ಸೇರಿಕೊಂಡು, ಒಂದು ಕಡೆ ದಣಿವಾರಿಸಲು ಕುಳಿತರು. ಬರುವಾಗ ದಾರಿಯಲ್ಲೊಂದು ಛತ್ರದಿಂದ ಕಟ್ಟಿಕೊಂಡು ಬಂದ ಊಟದ ಪದಾರ್ಥಗಳನ್ನು ಇಬ್ಬರೂ ತಿಂದರು. ಆದರೆ ಒಬ್ಬರಿಗೆ ತಿಳಿಯದಂತೆ ಒಬ್ಬರು ಅದರಲ್ಲಿ ವಿಷ ಬೆರೆಸಿಟ್ಟುದರಿಂದ ಇಬ್ಬರೂ ಸ್ವಲ್ಪ ಹೊತ್ತಿಗೆ ಅಲ್ಲೇ ಬಿದ್ದರು" ಎಂದು ಕಥೆಯನ್ನು ಪೂರ್ಣಮಾಡಿದನು ಕೃಷ್ಣಚಂದ್ರ.

ಆಮೇಲೆ ಕೃಷ್ಣಚಂದ್ರನು ಶಿಷ್ಯರನ್ನು ನೋಡಿ, "ನಿಜ ನೋಡಿದರೆ ಶಾಮನೂ ಆಲಯದ ಪೂಜಾರಿಯೂ ಅಂತಹ ದೊಡ್ಡ ಅಪಾಯಕಾರಿಗಳಾಗಿದ್ದವರಲ್ಲ. ಅವರಲ್ಲಿ ಅಣುವಿನಷ್ಟೇ ಪ್ರಾರಂಭವಾದ ಪತನ ಮಾರ್ಗವು ಎರಡು ದಿನಗಳೊಳಗೆ ಸರ್ವನಾಶಮಾಡಿಬಿಟ್ಟಿತು!" ಎಂದನು.

ಕಥೆಯನ್ನು ಕೇಳಿ ಶಿಷ್ಯರೆಲ್ಲಾ ಭಾರವಾದ ಮನಸ್ಸಿನಿಂದ ಅಲ್ಲಿಂದ ಎದ್ದರು. ಕಳ್ಳತನ ಮಾಡಿದ ವಿದ್ಯಾರ್ಥಿ ಕಣ್ಣೀರಿನೊಂದಿಗೆ ಕೃಷ್ಣಚಂದ್ರನಿಗೆ ತಲೆಬಾಗಿ ನಮಸ್ಕಾರ ಮಾಡಿ, "ನನ್ನ ಪತನವು ನನಗೆ ಅರ್ಥವಾಯಿತು ಸ್ವಾಮಿ. ಇನ್ನೆಂದಿಗೂ ಇಂತಹ ಕೆಲಸ ಮಾಡಲಾರೆನು" ಎಂದನು.

ಶಿಷ್ಯರೆಲ್ಲಾ ಹೊರಟು ಹೋದ ಮೇಲೆ ಕೃಷ್ಣಚಂದ್ರನು ಮನೆಯೊಳಗೆ ಬಂದಾಗ, ಅವನ ಹೆಂಡತಿ ಕಣ್ಣೀರು ಒರೆಸಿಕೊಳ್ಳುತ್ತ, "ಆ ವಿದ್ಯಾರ್ಥಿ ಏನೋ

ಒಳ್ಳೆಯ ಬುದ್ಧಿ ತಂದುಕೊಂಡಾನು. ಆದರೆ ಪಾಪ, ಆ ಶಾಮನೂ, ಪೂಜಾರಿಯೂ ಎಂತಹ ದುರದೃಷ್ಟದವರು! ಹಾಗಾಗಬಾರದಿತ್ತು!" ಎಂದಳು.

ಕೃಷ್ಣಚಂದ್ರನು ನಗುತ್ತ, "ಪೂಜಾರಿಯದೇನೋ ದುರದೃಷ್ಟವೆನ್ನಬಹುದು. ಶಾಮನದು ಮಾತ್ರ ದುರದೃಷ್ಟವೆನ್ನಲಾಗದು" ಎಂದನು.

"ಅದೇಕೆ?" ಎಂದು ಹೆಂಡತಿ ಆಶ್ಚರ್ಯದಿಂದ ಕೇಳಿದಳು.

"ಶಾಮನು ಕೂಡಲೇ ಸಾಯಲಿಲ್ಲ. ಪೂಜಾರಿ ಮುದುಕನಾದುದರಿಂದ ವಿಷ ಪ್ರಯೋಗವು ಕೂಡಲೇ ಪರಿಣಮಿಸಿ ಸತ್ತನು. ಶಾಮನು ಸಾವು ಬದುಕುಗಳ ನಡುವೆ ನರಳಿಕೊಂಡಿರುವಾಗ, ಆಯುರ್ವೇದ ಪಾರಂಗತನೂ, ಮಹಾ ಮಂತ್ರವೇತ್ತನೂ ಆದ ಒಬ್ಬ ಧರ್ಮಾತ್ಮನು ಅವನನ್ನು ಕಾಪಾಡಿ ಪ್ರಾಣ ದಾನ ಮಾಡಿದನು. ಅವನ ಕಥೆಯನ್ನೆಲ್ಲಾ ಕೇಳಿ ಕೂಡಾ ಅವನ ಮೇಲೆ ತಿರಸ್ಕಾರ ತೋರದೆ, ಶಾಮನಿಗೆ ಒಳ್ಳೆಯ ಜ್ಞಾನ ಭಿಕ್ಷೆ ಕೂಡಾ ನೀಡಿದನು" ಎಂದನು ಕೃಷ್ಣಚಂದ್ರ.

"ಒಂದು ದಿನದ ವ್ಯತ್ಯಾಸದಲ್ಲಿ ಶಾಮನು ಎರಡು ಸಾವುಗಳಿಗೆ ಕಾರಣನಾದನು. ಆ ಪಾಪಗಳಿಗೆ ಏನೋ ಸ್ವಲ್ಪ ಪ್ರಾಯಶ್ಚಿತ್ತವಾಗುತ್ತಿದ್ದರೆ ಒಳ್ಳೆಯದಿತ್ತು" ಎಂದಳು ಕೃಷ್ಣಶರ್ಮನ ಹೆಂಡತಿ.

"ಅಂತಹ ಪ್ರಾಯಶ್ಚಿತ್ತ ಕೂಡಾ ಆಗದೆ ಬಿಡಲಿಲ್ಲ. ಅವನು ಶಾಮನನ್ನು ಶಿಷ್ಯನಾಗಿ ಸ್ವೀಕರಿಸಿದರೂ ಅವನನ್ನು ಒಂದು ವರ್ಷದವರೆಗೆ ಗುರುಕುಲದ ವಾಸಕ್ಕೆ ಅರ್ಹನಾಗಿ ತೆಗೆದುಕೊಳ್ಳಲಿಲ್ಲ. ಶಾಮನು ಗುರುಕುಲಕ್ಕೆ ಹತ್ತಿರದಲ್ಲಿದ್ದ ಒಂದು ಬೆಟ್ಟದ ಗುಹೆಯಲ್ಲಿಯೇ ಒಂದು ವರ್ಷವನ್ನು ಕಳೆಯಬೇಕಾಗಿ ಬಂತು. ಒಟ್ಟಿನ ಮೇಲೆ ಸ್ವತಃ ಬುದ್ಧಿವಂತನಾದ ಅವನು ಆ ಮಹಾತ್ಮನ ಹತ್ತಿರ ಜ್ಞಾನಾರ್ಜನೆಯನ್ನು ಮಾಡಿ ಕೃಷ್ಣಚಂದ್ರನಾದನು" ಎಂದನು.

"ಆಂ! ಶಾಮನು ನೀವೇನಾ!" ಎಂದು ಕೃಷ್ಣಚಂದ್ರನ ಹೆಂಡತಿ ಬೆರಗಾಗಿ, ಆಮೇಲೆ, "ಹೌದು, ಆ ನವರತ್ನ ಹಾರ ಏನಾಯಿತು?" ಎಂದು ಕೇಳಿದಳು.

"ಅದನ್ನು ಆಗಲೇ ಮಹಾರಾಜನ ಕೈಗೆ ಸೇರಿಸಲಾಯಿತು. ನನ್ನ ಗುರುವಿನ ಕಾರಣದಿಂದ ನಾನು ಶಿಕ್ಷೆಗೆ ಗುರಿಯಾಗಲಿಲ್ಲ. ನೀರಿನ ಹಾಗೆ ಅಧೋಮುಖವಾಗಿ ಪಯಣಿಸಿಕೊಂಡಿದ್ದ ನನ್ನನ್ನು ಊರ್ಧ್ವಮುಖನನ್ನಾಗಿಸಿ, ಕೀರ್ತಿಯ ಶಿಖರಕ್ಕೇರುವಂತೆ ಮಾಡಿದ ಮಹಾತ್ಮನು ನನಗೆ ಪುನರ್ಜನ್ಮ ಪ್ರಸಾದಿಸಿದ್ದಾನೆ. ಆತನ ಶಿಷ್ಯನಾದುದು ನನ್ನ ಭಾಗ್ಯ!" ಎಂದನು ಕೃಷ್ಣಚಂದ್ರ.





# ಬದಲಾವಣೆ

**ಹಿಂ**ದೆ ಗಣಪವರವೆಂಬ ಒಂದು ಊರಿನಲ್ಲಿ ತಿರುಪತಮ್ಮ, ತಿರುಪತಯ್ಯ ಎಂಬವರು ದಂಪತಿಗಳಾಗಿ ಸಂಸಾರ ನಡೆಸಿಕೊಂಡಿದ್ದರು. ತಿರುಪತಯ್ಯ ತುಂಬಾ ಬಡವನು. ಗ್ರಾಮದೊಳಗಿನ ರೈತರ ಹತ್ತಿರ ಕೆಲಸಮಾಡಿ ಸಿಕ್ಕಿದ ಹಣವನ್ನು ಮನೆಗೆ ತರುವನು. ತಿರುಪತಮ್ಮ ಮಾತ್ರ ಯಾವ ಕೆಲಸಗಳಿಗೂ ಹೋಗದೆ, ದಿನವಿಡೀ ಯಾರೋ ಒಬ್ಬರೊಂದಿಗೆ ಮಾತಾಡಿ, ರಗಳೆ ತೆಗೆಯುವುದರಲ್ಲಿ ಆನಂದಪಡುವಳು. ಇತರರ ವಿಷಯದಲ್ಲಿ ಬೇಕೆಂದೇ ಬಾಯಿ ತೂರಿಸಿ, ತನ್ನ ನಾಲಿಗೆಯ ಹೊರಳಿಕೆಯಿಂದ, ಗಂಟಲ ಶಬ್ದದಿಂದ ಅವರಿವರನ್ನು ಬೈದು ತಾನೇ ಗೆದ್ದವಳಾಗಿ ಉಬ್ಬಿಕೊಳ್ಳುವಳು. ಅವಳ ಬಾಯಿಯ ಬಲಕ್ಕೆ ಹೆದರಿ ತಿರುಪತಯ್ಯ ಏನೂ ಮಾತಾಡದೆ ಸುಮ್ಮನಿರುವನು.

ಒಂದು ದಿನ ತಿರುಪತಮ್ಮನ ಎಮ್ಮೆ ಪಕ್ಕದಲ್ಲಿದ್ದ ರಂಗಣ್ಣನ ತೋಟದಲ್ಲಿದ್ದ ತರಕಾರಿ ಗಿಡಗಳನ್ನು ತಿಂದಿತು. ತನಗೆ ನಷ್ಟವಾದರೂ ರಂಗಣ್ಣ ಹೆದರಿ ತಿರುಪತಮ್ಮನ ಬಾಯಿಯ ಶಾಪನಾರ್ಥಗಳಿಗೆ ಬಾಯಿಮುಚ್ಚಿ ಸುಮ್ಮನಿದ್ದುಬಿಟ್ಟನು. ಆದರೂ ಸ್ವಲ್ಪಹೊತ್ತಿನ ಮೇಲೆ, ಒಂದು ಸಾರಿ ಅವಳಿಗಿಷ್ಟು ಬುದ್ಧಿ ಹೇಳಬೇಕೆಂದು ರಂಗಣ್ಣನಿಗೆ ತೋರಿತು. ಎಮ್ಮೆ ತಿಂದ ತರಕಾರಿಯ ಓಳಿಯಲ್ಲಿ ವಿಷದ ಸಸಿಗಳನ್ನು ತಂದು ನೆಟ್ಟನು.

ಆ ಗಿಡಗಳು ಹಚ್ಚಗೆ ಕಾಣುವುದನ್ನು ನೋಡಿದ ತಿರುಪತಮ್ಮ ಅವು ಪಶುಗಳಿಗೆ ಆಗದ ನಂಜಿನ ಗಿಡಗಳೆಂದು ತಿಳಿಯದೆ, ರಾತ್ರಿಯ ಹೊತ್ತಿನಲ್ಲಿ ತನ್ನ ಎಮ್ಮೆಯನ್ನು ಬಿಚ್ಚಿ ಆ ಕಡೆಗೆ ಬಿಟ್ಟಳು. ರಂಗಣ್ಣ ಊಹಿಸಿದಂತೆಯೇ ಎಮ್ಮೆ ಆ ಗಿಡಗಳನ್ನೆಲ್ಲ ಮೇದು, ಮರುದಿನ ಸಾಯಂಕಾಲದ ಹೊತ್ತಿನಲ್ಲಿ ಹೊಟ್ಟೆ ಉಬ್ಬರಿಸಿ ತಟಪಟನೆ ತುಳ್ಳಿಕೊಂಡು ಸತ್ತು ಹೋಯಿತು.

ಎರಡು ಹೊತ್ತೂ ತುಂಬಾ ಹಾಲು ಕೊಡುವ ಎಮ್ಮೆ ಸತ್ತುಹೋದುದನ್ನು ನೋಡಿ ತಿರುಪತಮ್ಮ ಗಂಡನೊಂದಿಗೆ “ನೋಡಿದಿರಾ! ಇನ್ನು ಮೇಲೆ ನಾವು ಈ ಊರಿನಲ್ಲಿ ಬದುಕಲು ಸಾಧ್ಯವಿಲ್ಲಪ್ಪ. ನಾವು ಸುಖವಾಗಿ ಬದುಕುವುದನ್ನು ನೋಡಿ ಸುತ್ತುಮುತ್ತಲಿದ್ದವರಿಗೆ ಹೊಟ್ಟೆ ಉರಿಯುತ್ತಾ ಇದೆ. ಅದಕ್ಕೇ ನಮ್ಮ ಎಮ್ಮೆಯ ಮೇಲೆ ದೃಷ್ಟಿ

ಎಂ. ಡಿ. ಸೌಜನ್ಯ

ಹಾಕಿಯೋ, ಮಂತ್ರದಿಂದಲೋ ಕೊಂದುಬಿಟ್ಟಿದ್ದಾರೆ ಪಾಪಿಗಳು!" ಎಂದಳು.

"ಸರಿ ಸರಿ. ನಡೆದದ್ದೇನೋ ನಡೆದುಹೋಯಿತಲ್ಲ. ಇನ್ನು ರಗಳೆ ಎಬ್ಬಿಸಿಕೊಂಡರೆ ಲಾಭವೇನಿದೆ?" ಎಂದನು ತಿರುಪತಯ್ಯ ಶಾಂತತೆಯಿಂದಲೇ.

ಆ ಮಾತು ಕೇಳಿ ತಿರುಪತಮ್ಮ ಭದ್ರಕಾಳಿಯ ಹಾಗೆ ಕೋಪದಿಂದ, "ಇದು ಊರೇ ಅಲ್ಲ, ಸ್ಮಶಾನ. ಸುಡುಗಾಡಿನಲ್ಲಿ ವಾಸಮಾಡಲು ನಾನೊಲ್ಲೆ! ಸುತರಾಂ ಸಾಧ್ಯವಿಲ್ಲ. ನಾಳೆ ಬೆಳಿಗ್ಗೆಯೇ ಇಲ್ಲಿಂದ ಹೊರಟು ನನ್ನ ತೌರಿಗೇ ಹೋಗಿಬಿಡೋಣ. ಅಲ್ಲಿಯೂ ನಿಮಗೆ ಕೂಲಿ ಕೆಲಸ ಸಿಕ್ಕದೇ ಹೋಗದು" ಎಂದಳು.

ಹೆಂಡತಿಯ ಮಾತಿಗೆ ಇದಿರಾಡಲಾಗದೆ ತಿರುಪತಯ್ಯ ಮರುದಿನ ಬೆಳಿಗ್ಗೆ ಅವಳನ್ನು ಕರೆದುಕೊಂಡು ಅವಳ ತೌರಿನ ಕಡೆಗೆ ಹೊರಟನು. ಅವರಿಬ್ಬರೂ ಊರನ್ನು ದಾಟಿ ಕೆರೆಯ ಹತ್ತಿರ ಬಂದರು. ಆ ಕೆರೆಯಲ್ಲಿ ಮೀನುಗಾರ ಮಾಸಪ್ಪನು ಎರಡು ಗಾಳಗಳೊಂದಿಗೆ ಮೀನು ಹಿಡಿಯುತ್ತಿರುವುದನ್ನು ನೋಡಿದರು. ಅವರು ಬಂದಾಗ ಅವನು ಒಂದು ಮೀನನ್ನು ಗಾಳದಿಂದ ಎಳೆದು ಬುಟ್ಟಿಯೊಳಗೆ ಹಾಕುತ್ತಿದ್ದನು.

ತಿರುಪತಮ್ಮ ಅದನ್ನು ನೋಡಿ ಕಣ್ಣುಗಳನ್ನು ಇಷ್ಟಗಲಮಾಡಿ, ಮೂಗಿನ ಮೇಲೆ ಬೆರಳಿಟ್ಟು, "ಓಹೊ! ಎರಡು ಕೈಗಳಿಂದಲೂ ಸಂಪಾದಿಸುವುದೆಂದರೆ ಇದೇ ಅಂತ ಕಾಣುತ್ತೆ! ಆ ಕೈಯಲ್ಲೊಂದು ಗಾಳ, ಈ ಕೈಯಲ್ಲೊಂದು ಗಾಳ! ಈ ಮಾಸಪ್ಪ ಕೆರೆಯ ದಂಡೆಯಲ್ಲಿ ಹೊಟ್ಟೆ ತಣ್ಣಗಿಟ್ಟು ಕುಳಿತುಕೊಂಡು ಮೀನುಗಳನ್ನು ದಂಡೆಗೆ ಎಳೆದೆಳೆದು ಹಾಕುತ್ತ ನಮ್ಮಂಥವರಿಗೆ ತುಂಬ ಬೆಲೆಗೆ ಮಾರುತ್ತಾನೆ. ಗೇಣುದ್ದ ಕೂಡಾ ಇಲ್ಲದ ಆ ಮೀನಿನ ಬೆಲೆ ಎಷ್ಟು ಹೇಳುತ್ತಾನೋ ನೋಡುತ್ತೇನೆ" ಎಂದು ಹೇಳುತ್ತಾ ಅವನ ಬುಟ್ಟಿಯೊಳಗೆ ಕೈ ಹಾಕಿದಳು.



ಆಗ ಆ ಬುಟ್ಟಿಯೊಳಗೆ ಮೀನುಗಳು ಮಾತ್ರವಲ್ಲದೆ ಅವುಗಳ ಜೊತೆಯಲ್ಲಿ ಕೆಲವು ಏಡಿಗಳೂ ಇದ್ದುವು. ಅವುಗಳಲ್ಲಿ ಒಂದು ಏಡಿ ತಿರುಪತಮ್ಮನ ಕೈಯನ್ನು ಬಲವಾಗಿ ಹಿಡಿದೊತ್ತಿ ಚಿವುಟಿತು.

ತಿರುಪತಮ್ಮ ನೋವನ್ನು ತಾಳಲಾಗದೆ, ಮಾಸಪ್ಪನನ್ನು ನೋಡಿ, "ಎಂಥಾ ಬುದ್ಧಿಗೆಟ್ಟ ಮೀನುಗಾರ ನೀನು? ಒಂದೇ ಬುಟ್ಟಿಯಲ್ಲಿ ಏಡೀನೂ ಮೀನನ್ನೂ ಹಾಕುವುದುಂಟೆ?" ಎಂದು ಬೈಗಳ ಅರ್ಚನೆಗೆ ಪ್ರಾರಂಭಿಸಿದಳು.

ಮಾಸಪ್ಪನು ಅವಳ ಕೋಪವು ತಗ್ಗುವವರೆಗೂ ಸುಮ್ಮನಿದ್ದು, ಅವಳು ಉಸಿರು ಬಿಡಲು ಮಾತು ನಿಲ್ಲಿಸಿದಾಗ, "ಓ ಅಮ್ಮಾ, ಈ ಮೀನುಗಳೂ ಏಡಿಗಳೂ ಈ ಕೆರೆಯಲ್ಲಿ ಸಿಕ್ಕಿದಂಥವು. ಅವು ನೀರಿನಲ್ಲಿ ಸೇರಿಕೊಂಡು ಸ್ನೇಹದಲ್ಲಿದ್ದ ಹಾಗೆಯೇ ಬುಟ್ಟಿಯಲ್ಲಿ ಕೂಡಾ ಕೂಡಿಕೊಂಡಿವೆ. ಉಳಿದ ಮೀನುಗಳೆಲ್ಲಾ ಬಾಯಿಮುಚ್ಚಿಕೊಂಡಿದ್ದರೆ ಈ ಬುಟ್ಟಿಯೊಳಗಿನ

ಮೀನುಗಳು ಕೆರೆಯಲ್ಲಿಯೇ ಸೊಗಸಾಗಿ ಇರುತ್ತಿದ್ದುವು. ಎರೆಗಳ ಮೇಲೆ ಆಶೆಪಟ್ಟು ಪ್ರಾಣಕ್ಕೇ ತಂದುಕೊಂಡುವು ಪಾಪ!" ಎಂದನು.

"ಸಾಕುಮಾಡು ನಿನ್ನ ಮೀನುಗಳ ಪುರಾಣ! ನನ್ನ ಬೆರಳು ನಿನ್ನ ಏಡಿಯಿಂದ ಹೋಯಿತು!" ಎಂದಳು ತಿರುಪತಮ್ಮ ಕೈಯನ್ನು ಕೊಡರಿಕೊಂಡು ಹಲ್ಲುಕಚ್ಚಿ ರೋಷ ವ್ಯಕ್ತಪಡಿಸುತ್ತ.

ಮಾಸಪ್ಪ ಕಿರುನಗು ತೋರಿಸಿ, "ಇಲ್ಲದ ಜಗಳ ಕೆದರುವುದು ಕೆಲವು ಮನುಷ್ಯರ ಅಭ್ಯಾಸ. ಅವರಿಗೆ ಅದು ಹುಟ್ಟು ಗುಣದ ಹಾಗೇನೇ, ಏಡಿಯ ಗುಣ ಕೂಡಾ ಅಂಥವರ ಹಾಗೇನೇ. ಅದು ನೀರಲ್ಲಿದ್ದರೂ, ಹೊರಗೆ ಬಿದ್ದರೂ ಅದರ ಗುಣ ಹೋಗದು. ಆದರೂ ಒಂದು ಸಣ್ಣ ಮಾತು ಅಮ್ಮಾ. ನೀವು ಬುಟ್ಟಿಯೊಳಗೆ ಕೈ ತೂರಿಸಿ ಅದನ್ನೇಕೆ ಕೆದರಿಸಬೇಕಿತ್ತು?" ಎಂದು ಕೇಳಿದನು.

ತಿರುಪತಯ್ಯನಿಗೆ ತಾನು ಹುಟ್ಟಿ ಬೆಳೆದ ಊರನ್ನು ಬಿಡಬೇಕೆಂದಿರಲಿಲ್ಲ. ಅಂತಲೇ ಅವನು ಹೆಂಡತಿಯೊಂದಿಗೆ, "ಈ ಮಾಸಪ್ಪನ ಮಾತು ಎಷ್ಟು ಸತ್ಯ ನೋಡಿದೆಯಾ? ಏಡಿಯ ಹಾಗೆ ಬುದ್ಧಿ ಬದಲಾವಣೆಯಾಗದವರೆಗೂ ನಾವು ಗಣಪವರದಲ್ಲಿದ್ದರೂ, ನಿನ್ನ ತೌರೂರಿನಲ್ಲಿದ್ದರೂ ಸುತ್ತಮುತ್ತಲಿನವರು ನಮ್ಮನ್ನು ನೋಡಿ ಅಸಹ್ಯಪಡುತ್ತಲೇ ಇರುತ್ತಾರೆ. ನೀನು ಈಗ ಏಡಿಯನ್ನು ಮುಟ್ಟಲು ಹೋದುದರಿಂದಲೇ ಅದು ನಿನ್ನ ಬೆರಳನ್ನು ಹಿಡಿದು ಚಿವುಟಿತು. ಅಲ್ಲವೆನ್ನುವೆಯಾ?" ಎಂದನು.

"ಅಲ್ಲದೇನು? ಇನ್ನೂ ಬೆರಳು ಭುಗುಭುಗು ಅನ್ನುತ್ತಾ ಇದೆ" ಎಂದಳು ತಿರುಪತಮ್ಮ.

"ಹಾಗಾದರೆ ನನ್ನ ಮಾತು ಶಾಂತವಾಗಿ ಕೇಳು. ಈ ಮೀನುಗಾರ ಮಾಸಪ್ಪ ಸ್ವಲ್ಪ ಗೂಢಾರ್ಥವಾಗಿ ಏನು ಹೇಳಿದ ಗೊತ್ತಾ? ಬಾಯಿ ಒಳ್ಳೇದಾದರೆ ಊರು ಒಳ್ಳೇದಾಗುತ್ತೆ ಅಂತ. ಇಷ್ಟು ಕಾಲ ಈ ಊರಿನಲ್ಲಿ ರಗಳೆ ಎಬ್ಬಿಸದೆ ಬದುಕಲಾಗದವರಿಂದ ಬೇರೆ ಊರಿಗೆ ಹೋದರೆ ಮಾತ್ರ ಬದುಕಲಾಗುತ್ತದೆಯೆ? ಮೊದಲು ನಮ್ಮ ಬುದ್ಧಿ ಬದಲಾಗಬೇಕು. ಏನನ್ನುವಿ?" ಎಂದನು ತಿರುಪತಯ್ಯ.

ತಿರುಪತಮ್ಮ ಸ್ವಲ್ಪ ಯೋಚಿಸಿ, "ನಾನು ಹೇಳಲಿಕ್ಕೇನಿದೆ? ನಡೆಯಿರಿ, ಮನೆಗೇ ಹಿಂದಿರುಗೋಣ. ಏಡಿಯಿಂದ ತನ್ನ ಗುಣ ಬದಲಾಯಿಸಲಿಕ್ಕೆ ಆಗದಿದ್ದರೆ ಮನುಷ್ಯಳಾದ ನನ್ನಿಂದಾಗುವುದೋ ಇಲ್ಲವೋ ನೋಡುತ್ತೇನೆ. ಆ ಸಂಗತಿ ಒಂದು ವಾರದೊಳಗೇ ನಿಮಗೆ ಗೊತ್ತಾದೀತು" ಎಂದು ಹೇಳಿದಳು.

ಹೆಂಡತಿಯಲ್ಲಿ ಬಂದ ಬದಲಾವಣೆ ನೋಡಿ ತಿರುಪತಯ್ಯನಿಗೆ ಬಹಳ ಸಂತೋಷವಾಯಿತು.






## ೧೪

[ಚಂದ್ರವರ್ಮನು ಬೆಟ್ಟದ ಕೆಳಭಾಗದಲ್ಲಿದ್ದ ಒಂದು ಗುಡಿಸಲಿಗೆ ಹೋದನು. ಅಲ್ಲಿ ಒಬ್ಬ ಮುದುಕನ ಚಂದ್ರವರ್ಮನನ್ನು ರಾಜಭಟನೆಂದು ಅನುಮಾನಿಸಿ, ಬಳಿಕ ನಿಜ ತಿಳಿದುಕೊಂಡನು. ಅವನ ಮಗನನ್ನು ರಾ ಭಟರು ಬಂಧಿಸಿದ್ದರಂತೆ. ಅವನ ಹತ್ತಿರ ಕಂಚುಕೋಟೆಗೆ ಹೋಗುವ ದಾರಿಯ ಪಟವಿರುವುದೂ ತಿಳಿಯಿ ಅಷ್ಟರಲ್ಲಿ ರಾಜಭಟರು ಅಲ್ಲಿಗೆ ಬಂದರು. ಮುದುಕನು ಓಡಿಹೋದನು. — ಇನ್ನು ಓದಿ]

**ಗು**ಡಿಸಲಿನೊಳಗಿನಿಂದ ತೇಜಸ್ವೀ ಯುವಕನಾದ ಚಂದ್ರವರ್ಮನು ಹೊರಗೆ ಬರುವುದನ್ನು ನೋಡಿ ರಾಜಭಟರು ಚಕಿತರಾಗಿ ನಿಂತರು. ಗುಡಿಸಲಲ್ಲಿರುವ ಮುದುಕನನ್ನು ಅವರು ಕಂಡಿದ್ದರು. ಈ ದಿನ ಆ ಚಾಲಾಕೀ ಮುದುಕನನ್ನು ಹಿಡಿದು ಹಿಂಗಟ್ಟು ಮುರಿಗಟ್ಟಿ ಮಹಾರಾಜನ ಬಳಿಗೆ ಎಳೆದುಕೊಂಡು ಹೋಗಿ ಬಿಟ್ಟರೆ ತಮಗೆ ಭಾರಿ ಬಹುಮಾನ ಸಿಗುವುದೆಂದು ಅವರು ನಂಬಿದ್ದರು. ಈಗ ಅಲ್ಲಿ ಆ ಮುದುಕನ ಬದಲಿಗೆ ಹೊಸಬನಾದ ಚಂದ್ರವರ್ಮನು ಕಾಣಲು, ಭಟರ ನಾಯಕನು ತನಗಾದ ಬೆರಗನ್ನು ಸಮಾಳಿಸಿಕೊಂಡು, "ನೀನು ಯಾರು ? ಇಲ್ಲಿ ಒಬ್ಬ ಮ ನಿದ್ದನಷ್ಟೆ ? ಅವನೆಲ್ಲಿದ್ದಾನೆ ? " ಎಂದು ಕೇ "ಹೂಂ, ಬೇಗ ಹೇಳಿಬಿಡು. ಸರಿಯಾದ ಕೊಡದಿದ್ದರೆ..." ಎಂದು ಅವನು ಕಣ್ಣು ಒರೆಯಿಂದ ಕತ್ತಿಯನ್ನು ಸೆಳೆದು ಚಂದ್ರವ ಹತ್ತಿರ ಬರತೊಡಗಿದನು.

"ನೀವು ಹೇಳುವ ಮುದುಕ ತದುಕನ ಯಾವುದೂ ನನಗೆ ಗೊತ್ತಿಲ್ಲ. ಇನ್ನು ಯಾರೆಂಬುದನ್ನು ನಿಮಗೆ ಹೇಳುವುದಕ್ಕೆ ವೆ ನೀವು ಯಾರೆಂಬುದು ನನಗೆ ತಿಳಿಯಬೇ




ನನ್ನು ಬಿಟ್ಟು ಒಳ್ಳೆಯದರಲ್ಲಿ ಹೇಳಿರಿ" ಚಂದ್ರವರ್ಮನೂ ಕತ್ತಿ ಹಿರಿದು ನಿಂತು ನು.

ದ್ರವರ್ಮನ ಕಂಠದಿಂದ ಹೊರಟ ಮಾತಿನ ನನ್ನೂ, ಕತ್ತಿ ಹಿರಿಯುವುದರಲ್ಲಿ ಅವನು ಸಿದ ನಿರ್ಭೀತಿಯನ್ನೂ, ಚಾಣ್ಮೆಯ ದ್ಯೋತಕ ಮನಗಂಡು ಭಟರ ನಾಯಕನು ಕ್ಷಣಕಾಲ ತನಾದನು. ಆ ಸಂಧಿಯಲ್ಲಿ ಚಂದ್ರವರ್ಮನು, ರಿ, ನೀವು ಯಾರು, ಯಾವ ರಾಜನ ಸೇವಕ ದು ಈ ಕ್ಷಣದಲ್ಲೇ ನನಗೆ ತಿಳಿಯಬೇಕು. ಸುತ್ತಿಮುತ್ತಿ ಹತಮಾಡಲು ಪ್ರಯತ್ನಿ ಅದು ನಿಮ್ಮ ನಾಶಕ್ಕೇ ದಾರಿಯಾಗುತ್ತದೆ. ಲ್ಲಿ ಹಿಂಬದಿಯ ರಕ್ಷಣೆಯಾಗಿ ಗುಡಿಸಲಿನ ವಾದರೂ ಇದೆ. ಆ ಕಡೆಯಿಂದ ನನ್ನನ್ನು ಡೆಯಲು ಸಾಧ್ಯವಿಲ್ಲ. ಆದ್ದರಿಂದ ಬ್ಬರಾಗಿಯೇ ಹೋರಾಡಬೇಕಾಗಿದೆ.

ಒಬ್ಬನು ಸತ್ತ ಮೇಲೆ ಇನ್ನೊಬ್ಬನ ಸಾವು! ನನ್ನದು ಹೆದರಿಸಲು ಹೇಳುವ ಬರೀ ಬಾಯಿ ಮಾತಲ್ಲ! ಇದೋ ನನ್ನ ಪೆಟ್ಟು ತಡೆದುಕೊಳ್ಳಿ!" ಎಂದು ಕತ್ತಿ ಎತ್ತಿ ಹುಂಕರಿಸಿ ಮುಂದೆ ಹಾರಿದನು.

ಚಂದ್ರವರ್ಮನು ಹೇಳಿದ್ದೆಲ್ಲಾ ನಿಜವೇ ಎಂದು ಭಟರ ನಾಯಕನು ತಿಳಿದುಕೊಂಡನು. ಇದಿರಾಳಿ ಏಕಾಂಗಿಯಾದರೂ ಮುತ್ತಿ ಹಿಡಿಯುವ ಪ್ರಯತ್ನ ವ್ಯರ್ಥವೇ ಆಗುತ್ತದೆ. ಹಾಗೆ ಮುಖಾಮುಖೀ ಯುದ್ಧಕ್ಕೆ ನಿಂತರೆ ತಮ್ಮಲ್ಲಿ ಒಬ್ಬೊಬ್ಬರನ್ನೇ ಅವನು ಯಮಪುರಿಗೆ ಕಳಿಸುವಷ್ಟು ಚತುರನೇ ನಿಜ. ಅವನ ಶರೀರ ಸೌಷ್ಠವವನ್ನೂ ಕದಲಿಕೆಯನ್ನೂ ನೋಡಿದರೆ ನುರಿತ ಯೋಧನ ಹಾಗೆಯೇ ಕಾಣುತ್ತಿದ್ದಾನೆ.

ಇಷ್ಟೆಲ್ಲಾ ಕ್ಷಣಮಾತ್ರದಲ್ಲೇ ನೆನೆದು ಭಟರ ನಾಯಕನು ತಗ್ಗಿ, ಕತ್ತಿಯನ್ನು ಕೆಳಗಿಳಿಸಿ, "ಅಯ್ಯಾ, ತಾವು ಮಹಾ ಯೋಧರ ಹಾಗೆ ಕಾಣುತ್ತೀರಿ. ಅಂತಹ ನಿಮಗೂ ನಿಮ್ಮಂಥ ಯೋಧನಾದ ನನಗೂ ವೈಯಕ್ತಿಕ ವಿರೋಧವೇನಿಲ್ಲ. ಅಸಲು ಪರಿಚಯವೇ ಇಲ್ಲ. ಹಾಗಿರುವಾಗ ವ್ಯರ್ಥವಾಗಿ ನಮ್ಮೊಳಗೆ ಜಗಳವೇಕೆ? ಸ್ವಲ್ಪವೂ ಇದಿರು ನೋಡದ ರೀತಿ ಯಲ್ಲಿ ನಾವು ಅಂದುಕೊಂಡವನಿಗೆ ವಿರುದ್ಧವಾದ ನಿಮ್ಮನ್ನು ನೋಡಿ ಯಾರೋ ಅಂದುಕೊಂಡು ನಮ್ಮಂಥ ಭಟರಿಗಿರುವ ದರ್ಪವನ್ನು ತೋರಿಸಿದೆನು, ಅಷ್ಟೇ. ನಡೆದುದೇನೋ ನಡೆಯಿತು, ಕ್ಷಮಿಸಿಬಿಡಿ. ನಾವು ರಾಜಾಜ್ಞೆಯಿಂದ ಒಬ್ಬ ಮುದುಕನನ್ನು ಹಿಡಿಯಲು ಈ ಕಾಡನ್ನೆಲ್ಲಾ ಗಾಳಿಸಿಕೊಂಡಿದ್ದೇವೆ. ಸರಿ, ಇನ್ನು ನಮ್ಮ ನಮ್ಮ ದಾರಿ ನಾವು ಹಿಡಿ ಯೋಣ" ಎಂದು ಭಟರ ನಾಯಕನು ರಾಜಿಯ ಮಾತುಗಳನ್ನಾಡಿದನು.

ತನ್ನ ಉಪಾಯ ಪರಿಣಾಮ ಮಾಡಿದ್ದುದನ್ನು ನೋಡಿ ಚಂದ್ರವರ್ಮನು ತನ್ನೊಳಗೆ ... ದರ್ಪದ

ವನ್ನೇ ತೋರಿಸಿ, "ಯಾರು ನಿಮ್ಮ ರಾಜ?" ಎಂದು ಪ್ರಶ್ನೆ ಮಾಡಿದನು.

"ಈ ದೇಶವನ್ನಾಳುವವರು ಯಾರೆಂದು ನಿಮಗೆ ತಿಳಿಯದೆ? ನೀವೀಗ ಯಾವ ರಾಜ್ಯದ ಸರಹದ್ದಿನಲ್ಲಿರುವಿರೋ ಆ ರಾಜ್ಯದ ರಾಜನನ್ನು ಅರಿಯೆನೆಂದರೆ ಬಹಳ ಆಶ್ಚರ್ಯವಾಗಿದೆ" ಎಂದನು ಭಟರ ನಾಯಕ.

ಆ ಮಾತು ಕೇಳಿ ಚಂದ್ರವರ್ಮನು ನಗುತ್ತ, "ರಾಜ್ಯವನ್ನೂ, ಅಲ್ಲಿಯ ರಾಜನನ್ನೂ, ರಾಜ್ಯಗಳ ಮೇರೆಗಳನ್ನೂ ತಿಳಿದುಕೊಳ್ಳಬೇಕೆಂಬುದನ್ನೆಲ್ಲ ಎಂದೋ ಮರೆತುಬಿಟ್ಟಿದ್ದೇನೆ. ಒಬ್ಬನೇ ಒಬ್ಬ ರಾಜ ನನ್ನ ದೃಷ್ಟಿಯಲ್ಲಿದ್ದಾನೆ. ನನ್ನ ಗುರುಗಳು ಸಾಯುವುದಕ್ಕೆ ಮೊದಲು ಒಬ್ಬ ಮಹಾರಾಜನನ್ನು ನೋಡಬೇಕೆಂದು ಆಜ್ಞೆ ಮಾಡಿದ್ದಾರೆ. ಆ ರಾಜನ ಹೆಸರು ಶಿವಸಿಂಹ ಮಹಾರಾಜನೆಂದು. ಆತನನ್ನು ನೋಡಬೇಕೆಂತಲೇ ನಾನು ಭರತಖಂಡದ ಒಂದು ಕೊನೆಯಿಂದ ಇನ್ನೊಂದು ಕೊನೆಯವರೆಗೂ ತಿರುಗುತ್ತಿದ್ದೇನೆ. ಹಾಗೆ ತಿರುಗುತ್ತ ನಾನು ಇಲ್ಲಿ ಈಗ ನಿಮ್ಮ ಕಣ್ಣಿಗೆ ಬಿದ್ದಿದ್ದೇನೆ. ಇಂಥ ಸ್ಥಳದಲ್ಲಿರುವ ಈ ಒಂಟಿ ಗುಡಿಸಲಿನಲ್ಲಿ ಯಾರಿರುವರೋ ನೋಡೋಣವೆಂದು ಬಂದೆನು. ನೀವು ಬಂದಿರಿ. ಸರಿ, ಇನ್ನು ನಮ್ಮ ನಮ್ಮ ದಾರಿ ನಮಗೆ ಇದ್ದೇ ಇದೆ" ಎಂದು ತಟಕ್ಕನೆ ಹಿಂದಿರುಗಿದನು.

ಚಂದ್ರವರ್ಮನ ಮಾತುಗಳನ್ನು ಕೇಳುತ್ತಿದ್ದಂತೆ, ರಾಜಭಟರೂ, ನಾಯಕನೂ ಆಶ್ಚರ್ಯಚಕಿತರಾಗುತ್ತಾ ಇದ್ದರು. ಹಿಂದಿರುಗಿ ಗುಡಿಸಲಿನ ಕಡೆಗೆ ಹೋಗುವಂತೆ ನಟಿಸುವ ಚಂದ್ರವರ್ಮನನ್ನು ಭಟರ ನಾಯಕನು "ಸ್ವಲ್ಪ ನಿಲ್ಲಿರಯ್ಯಾ" ಎಂದು ತಡೆದು, "ಅಯ್ಯಾ, ನಿಮ್ಮ ಮಾತು ಕೇಳುವಾಗ ಏನೋ ಹೇಳುತ್ತಾರಲ್ಲ, ಕಾಕತಾಳೀ ಅಂತ? ಹಾಗೇನೋ ಇದೆ. ನಿಮಗೆ ನಿಮ್ಮ ಗುರುಗಳು ಯಾವ ರಾಜನ



ಹೆಸರು ಹೇಳಿದರೋ, ಆ ಶಿವಸಿಂಹ ಮಹಾರಾಜರು ಈ ದೇಶವನ್ನಾಳುವವರೇ ಎಂದು ಅರ್ಥವಾಗುತ್ತದೆ. ನಿಮ್ಮ ತಿರುಗಾಟದ ಫಲ ಅಕಸ್ಮಾತ್ತಾಗಿ ದೊರಕಿದ ಹಾಗಿದೆ. ನಾವು ಶಿವಸಿಂಹ ಮಹಾರಾಜರ ಭಟರು" ಎಂದನು.

ಚಂದ್ರವರ್ಮನು ಅತ್ಯಂತ ಆಶ್ಚರ್ಯಪಡುವವನ ಹಾಗೆ ತೋರಿಸಿಕೊಳ್ಳುತ್ತ, "ಹೌದೇನು! ಧನ್ಯನಾದೆ! ಧನ್ಯನಾದೆ! ಎಷ್ಟೋ ಕಾಲದ ಮೇಲೆ ನನ್ನ ಪ್ರಯಾಣ ಫಲ ಕೊಟ್ಟಿತು. ಗುರುವಿನ ಆಜ್ಞೆ ಎಲ್ಲಿ ನೆರವೇರದೆ ಹೋಗುವುದೋ ಎಂದು ತುಂಬಾ ನಿರಾಶನಾಗಿದ್ದೆ. ನಡೆಯಿರಿ! ಈಗಲೇ ಶಿವಸಿಂಹ ಮಹಾರಾಜರ ದರ್ಶನ ಮಾಡುತ್ತೇನೆ. ಎಂದಿಗೂ ಮರೆಯುವಂತಹುದಲ್ಲ ನಿಮ್ಮ ಈ ಉಪಕಾರ" ಎಂದು ಭಟರನ್ನು ಅವಸರಪಡಿಸಿದನು.

ಭಟರ ನಾಯಕನು ತನ್ನ ಅನುಚರರ ಕಡೆಗೆ ಒಂದು ಸಾರಿ ದೃಷ್ಟಿ ಸಾರಿಸಿ, ಆಮೇಲೆ ಏನೋ



ಅನುಮಾನದಿಂದ ಚಂದ್ರವರ್ಮನನ್ನು ನೋಡುತ್ತ, "ಅಯ್ಯಾ, ನಿಮ್ಮ ಗುರುಗಳು ನಿಮ್ಮನ್ನು ನಮ್ಮ ಮಹಾರಾಜರನ್ನು ದರ್ಶನ ಮಾಡಬೇಕೆಂದು ಏಕೆ ಹೇಳಿದ್ದಾರೆಂದು ಸ್ವಲ್ಪ ನಮಗೆ ಹೇಳುವಿರಾ? ನಾವು ಯಾರನ್ನು ಕರಕೊಂಡು ಬರುವುದೆಂದು ಮಹಾರಾಜರೊಂದಿಗೆ ಹೇಳಬೇಕಷ್ಟೇ? ಅದೇನೂ ಅಂತಹ ಗುಟ್ಟಿನ ವಿಷಯವಾಗಿರಲಿಕ್ಕಿಲ್ಲ ಅಲ್ಲವೆ?" ಎಂದನು.

"ಯಾಕಿಲ್ಲ? ಗುಟ್ಟೆಂದರೆ ಸಾಧಾರಣದ ಗುಟ್ಟಲ್ಲ. ಬ್ರಹ್ಮರಹಸ್ಯಕ್ಕಿಂತಲೂ ಹೆಚ್ಚಿನ ರಹಸ್ಯವದು!" ಎಂದು ಚಂದ್ರವರ್ಮನು ಆಕಾಶಕ್ಕೆ ತಲೆಯೆತ್ತಿ, "ಆಹಾ! ಕಂಚುಕೋಟೆಯೇ! ನನ್ನ ಮುಷ್ಟಿಯೊಳಗೆ ಸಿಕ್ಕಿದೆಯಲ್ಲಾ!" ಎಂದು ಗಟ್ಟಿಯಾಗಿ ಉದ್ಗರಿಸಿದನು.

"ಕಂಚುಕೋಟೆ" ಎಂಬ ಶಬ್ದ ಕಿವಿಗೆ ಬಿದ್ದ ಕೂಡಲೇ ಭಟರ ನಾಯಕನು ಮೆಟ್ಟಿಬಿದ್ದು, "ಅಯ್ಯಾ, ನಿಮಗೆ ಆ ಕಂಚುಕೋಟೆಯ ಸಂಗತಿ ಹೇಗೆ ಗೊತ್ತು?" ಎಂದು ಕೇಳಿದನು.

"ಆ ಕಂಚುಕೋಟೆಯನ್ನು ಕುರಿತು ನನಗೂ ನನ್ನ ಗುರುಗಳಿಗೂ ಮಾತ್ರವೇ ಗೊತ್ತು ಅಂದುಕೊಂಡಿದ್ದೆನು. ಆದರೆ ನೀನು ಈಗ ಪ್ರಶ್ನೆ ಮಾಡಿದ್ದು ಕೇಳುವಾಗ ನಿನಗೂ ಅದರ ವಿಷಯ, ಸ್ವಲ್ಪವೋ ಹೆಚ್ಚೋ ಗೊತ್ತಿರುವ ಹಾಗೆ ಕಾಣುತ್ತದೆ. ಇದು ಇನ್ನಷ್ಟು ವಿಚಿತ್ರ! ಮತ್ತಿಷ್ಟು ಆಶ್ಚರ್ಯ!" ಎಂದು ಚಂದ್ರವರ್ಮನು ಮತ್ತಿಷ್ಟು ಆಶ್ಚರ್ಯವನ್ನು ಪ್ರದರ್ಶಿಸಿದನು.

"ಇದರಲ್ಲಿ ಅಷ್ಟು ಆಶ್ಚರ್ಯಪಡಲಿಕ್ಕೆ ಏನಿದೆ? ಆ ಕಂಚುಕೋಟೆಯನ್ನು ಸಂಬಂಧಿಸಿಕೊಂಡಿರುವ ಒಂದಾನೊಂದು ರಹಸ್ಯವನ್ನು ಅರಿಯಲಿಕ್ಕಾಗಿಯೇ ನಾವು ಕಾಡು ಕಾಡು ತಿರುಗುತ್ತ, ತಂತ್ರಗಾರ ಮುದುಕನೊಬ್ಬನನ್ನು ಹುಡುಕುತ್ತಿದ್ದೇವೆ" ಎಂದನು ಭಟರ ನಾಯಕ.

ಚಂದ್ರವರ್ಮನು ತನ್ನ ಬಲ ಅಂಗೈಯನ್ನು ಕ್ಷಣಮಾತ್ರ ದಿಟ್ಟಿಸಿ ನೋಡಿ, "ಆ! ಈಗ ಎಲ್ಲಾ ಗೊತ್ತಾಯಿತು! ಆ ಮುದುಕನ ಹತ್ತಿರ ಕಂಚುಕೋಟೆಗೆ ಹೋಗುವ ಮಾರ್ಗವನ್ನು ಸೂಚಿಸುವ ಚಿತ್ರಪಟವುಂಟೆಂದು ನಿಮ್ಮ ರಾಜನಿಗೆ ಅನುಮಾನವಾಗಿದೆ. ಆ ಮುದುಕನ ಮಗ ದೇವಲನೆಂಬವನನ್ನು ಹಿಡಿದು ಕಾರಾಗೃಹದಲ್ಲಿ ಬಂಧಿಸಿದ್ದಾನೆ ನಿಮ್ಮ ರಾಜ! ನಿಜತಾನೇ! ನಿಮ್ಮ ರಾಜನಿಗೆ ಒಂದೂ ತಿಳಿಯದು. ಶುದ್ಧ ಮುಗ್ಧ ಮನಸ್ಸು! ಅದರ ಕಥೆಯೇ ಬೇರೆ!" ಎಂದನು.

ಭಟರ ನಾಯಕನು ಚಂದ್ರವರ್ಮನನ್ನು ಪರೀಕ್ಷಿಸಿ ನೋಡುತ್ತ, "ಅಯ್ಯಾ, ನೀವು ದೊಡ್ಡ ಜ್ಞಾನಿಗಳ ಹಾಗೆ ಸರ್ವಜ್ಞರಿರುವಂತೆ ಕಾಣುತ್ತದೆ. ನಿಮ್ಮ ಅಂಗೈಯಲ್ಲಿ ಈ ವಿವರಗಳೆಲ್ಲಾ ಕಾಣುವುದೆಂದರೆ ಅತ್ಯಾಶ್ಚರ್ಯವೇ ಸರಿ!" ಎಂದನು.

"ಯಾರಿಗೆ ಆಶ್ಚರ್ಯ? ನಿನಗೋ, ನನಗೋ?" ಎಂದು ಚಂದ್ರವರ್ಮನು ಭಟರ ನಾಯಕನನ್ನು ನೋಡಿ, "ನೀವು ಈ ಕ್ಷಣದಲ್ಲಿ ಇಲ್ಲಿಂದ ಹೋಗಿ, ಅಲ್ಲಿ ಕಾಣುವ ಕಲ್ಲಿನ ರಾಶಿಗಳ ಹಿಂದೆ ಇರುವ ಹಳ್ಳ ಪ್ರದೇಶದಲ್ಲಿ ನನ್ನನ್ನು ಕಾದುಕೊಂಡಿರಿ, ನಾನು ಒಂದು ಸಣ್ಣ ಧ್ಯಾನಮಾಡಿ, ಕೆಲವು ಕ್ಷಣಗಳಲ್ಲಿ ಅಲ್ಲಿಗೆ ಬರುತ್ತೇನೆ. ಆಮೇಲೆ ಎಲ್ಲರೂ ಕೂಡಿ ರಾಜದರ್ಶನಕ್ಕೆ ಹೋಗಬೇಕು. ಇದು ಈಗ ಮೊದಲು ಮಾಡಬೇಕಾದ ಕೆಲಸ. ಗೊತ್ತಾಯಿತೇ? ಹುಂ, ಹೊರಡಿ!" ಎಂದನು ಆಜ್ಞಾಪಿಸುವಂತೆ.



ಹೀಗೆಲ್ಲ ಮಾತನಾಡುವ ಚಂದ್ರವರ್ಮನ ಹತ್ತಿರ ಏನೇನೋ ಅಮಾನುಷ ಶಕ್ತಿಗಳಿವೆಯೆಂದು ಭಟರ ನಾಯಕನು ಭ್ರಮಿಸಿ, ಮಂತ್ರಕ್ಕೆ ಕಟ್ಟುಬಿದ್ದವನ ಹಾಗೆ "ಅಪ್ಪಣೆ! ಅಪ್ಪಣೆ!" ಎಂದು ತನ್ನ ಅನುಚರರನ್ನೆಲ್ಲ ಕರೆದುಕೊಂಡು, ಕಲ್ಲು ರಾಶಿಯ ಹಿಂದಿನ ಪ್ರದೇಶಕ್ಕೆ ಬೇಗಬೇಗನೆ ಹೋದನು. ಅವರು ಕಲ್ಲು ರಾಶಿಯ ಹಿಂದೆ ಕಾಣದೆ ಹೋಗುತ್ತಲೇ ಚಂದ್ರವರ್ಮನು, ಅಲ್ಲಿಂದ ಹೊರಟು ತುಸು ದೂರದಲ್ಲಿರುವ ಮರಗಳ ಗುಂಪಿನೊಳಗೆ ಹೋಗಿ, "ಒಳ್ಳೇದೇ ಆಯಿತಯ್ಯಾ ಜಾಂಬವಂತಾ! ಎಲ್ಲವನ್ನೂ ಮಾತಾಡಿದ್ದೇನೆ. ದೇವಲನಿಗೆ ಅಪಾಯವೇನಿಲ್ಲ. ಎಲ್ಲಿರುವಿ ಜಾಂಬವಂತಾ?" ಎಂದು ಕೂಗಿ ಹೇಳಿದನು.

ಆ ಕೂಗು ಕೇಳಿ ಮುದುಕನು ಮರಗಳೆಡೆಯಿಂದ ಹೊರಗೆ ಬಂದು ಆಚೀಚೆ ನೋಡುತ್ತಾ, "ಜಾಂಬವಂತನಾರು?" ಎಂದು ಕೇಳುತ್ತಾ ಚಂದ್ರವರ್ಮನ ಸಮೀಪಕ್ಕೆ ಬಂದನು.

"ನೀನೇ ಜಾಂಬವಂತನು. ಓ ಮುದುಕಾ ಎಂದು ಕರೆಯುವುದು ಚೆನ್ನಾಗಿಲ್ಲವೆಂದು ಹಾಗೆ ಕರೆದೆನು. ನಾನು ಈಗ ಶಿವಸಿಂಹನ ಬಳಿಗೆ ಹೋಗುತ್ತಿದ್ದೇನೆ. ನಿನ್ನ ಮಗ ದೇವಲನನ್ನು ಸೆರೆಮನೆಯಿಂದ ಬಿಡಿಸಿ, ನಿನಗೆ ಕಂಚುಕೋಟೆಯಲ್ಲಿ ಸಿಗುವ ಧನರಾಶಿಗಳಲ್ಲಿ ಭಾಗ ಕೂಡಾ ಕೊಡಿಸುತ್ತೇನೆ. ಅಲ್ಲಿಗೆ ಹೋಗುವ ಮಾರ್ಗ ತಿಳಿಸುವ ಚಿತ್ರಪಟ ಎಲ್ಲಿದೆ? ಹೇಳಿಬಿಡು" ಎಂದನು ಚಂದ್ರವರ್ಮ.

"ನಿನ್ನ ಮಾತುಗಳನ್ನು ನಂಬಬಹುದೇನು?" ಎಂದು ಅನುಮಾನದಿಂದ ಕೇಳಿದನು ಮುದುಕ.

"ನಂಬದೆ ಇದ್ದರೆ ನಿನ್ನಿಂದ ಏನು ತಾನೇ ಮಾಡಲು ಸಾಧ್ಯವಿದೆ? ನಂಬಿದರೆ ನಿನಗೂ ನಿನ್ನ ಮಗನಿಗೂ ಕ್ಷೇಮ ಉಂಟಾಗುತ್ತದೆ. ಪಶ್ಚಿಮ ಸಮುದ್ರದ ತೀರದಲ್ಲಿ ಕಂಚುಕೋಟೆ ಇರುವುದೆಂದು ತಿಳಿದ ಮೇಲೆ ಅಲ್ಲಿಗೆ ಹೋಗಿ ಸೇರುವುದೊಂದು ದೊಡ್ಡ ಸಮಸ್ಯೆ, ಸಾಧ್ಯವೇ ಇಲ್ಲವೆಂದು ಭಾವಿಸಬೇಡ. ಸಮುದ್ರ ತೀರದಲ್ಲೇ ನಡೆದರೆ ಎಂದೋ ಒಂದು ದಿನ ಅಲ್ಲಿಗೆ ಹೋಗಿ ಮುಟ್ಟುವುದು ನಿಜ. ನಿನ್ನ ಹತ್ತಿರವಿರುವ ಚಿತ್ರಪಟವನ್ನು ನೋಡಿದರೆ ಅಲ್ಲಿಗೆ ತಲಪುವ ಸಮೀಪದ ದಾರಿಯೋ, ಸುಲಭ




ವಾದ ದಾರಿಯೋ ಸಿಗಬಹುದು. ಅಷ್ಟೇ ತಾನೇ ? ಶ್ರಮ ಕಡಿಮೆ ಮಾಡಿಕೊಳ್ಳುವುದಕ್ಕಾಗಿಯೇ ಕೇಳುತ್ತೇನೆ " ಎಂದನು ಚಂದ್ರವರ್ಮ.

ಇಷ್ಟು ಹೇಳಿದ ಮೇಲೆ ಮುದುಕನು ಮತ್ತೇನೂ ಮಾತಾಡದೆ, ತನ್ನ ದುಸ್ತಿನೊಳಗೆ ಅಡಗಿಸಿಟ್ಟುಕೊಂಡಿದ್ದ ದೊಡ್ಡದೊಂದು ತಾಳಪತ್ರಗಳ ಕಟ್ಟನ್ನು ಹೊರತೆಗೆದು, ಅದನ್ನು ಬೀಸಣಿಗೆಯ ಹಾಗೆ ಗುಂಡಗೆ ಬಿಡಿಸಿ ಚಂದ್ರವರ್ಮನೊಂದಿಗೆ, " ಇಕೋ, ಕಂಚುಕೋಟೆಗೆ ಹೋಗುವ ಮಾರ್ಗವನ್ನು ತಿಳಿಸುವ ಚಿತ್ರಪಟ ! " ಎಂದನು.

ಚಂದ್ರವರ್ಮನು ಆ ಪಟವನ್ನು ಶ್ರದ್ಧೆಯಿಂದ ಪರಿಶೀಲಿಸತೊಡಗಿದನು. ಅದರಲ್ಲಿ ಗುಡ್ಡಗಳು, ಕಾಡುಗಳು, ನದಿಗಳು, ಮರುಭೂಮಿಗಳನ್ನು ಸ್ಪಷ್ಟವಾಗಿ ಚಿತ್ರಿಸಲ್ಪಟ್ಟಿತ್ತು. ಸಮುದ್ರವನ್ನು ಚಿತ್ರಿಸಲ್ಪಟ್ಟ ಸ್ಥಳಕ್ಕೆ ತಾಗಿಕೊಂಡು ಎತ್ತರವಾದ ಗೋಡೆಗಳಿಂದ ಆವರಿಸಲ್ಪಟ್ಟುದರ ನಡುವೆ ದೊಡ್ಡ ದೊಡ್ಡ ಭವನಗಳನ್ನು ಹೊಗೆಯಂತಹುದು ಏನೋ ಮುಚ್ಚಿದ ಹಾಗೆ ಕಾಣುತ್ತಿತ್ತು. ಅದೇನಾದರೂ ಮಾಯೆಯೋ ?

ಚಂದ್ರವರ್ಮನು ತನ್ನೊಳಗೆ ಏಳುತ್ತಿದ್ದ ಭಯಾಂದೋಲನೆಗಳನ್ನು ಹತ್ತೊತ್ತಿಕೊಂಡು, " ಈ ಕಾಡು, ಮೇಡು, ನದಿ, ಮರುಭೂಮಿಗಳನ್ನು ದಾಟಿ ಮಾನವ ಮಾತ್ರನಿಂದ ಅಲ್ಲಿಗೆ ಹೋಗಿ ಸೇರಲು ಸಾಧ್ಯವಿದೆಯೆ ? " ಎಂದು ತನ್ನಂತಾನೇ ಪ್ರಶ್ನಿಸಿಕೊಂಡನು.

" ಈ ಕಂಚುಕೋಟೆಯನ್ನು ನನ್ನ ಪೂರ್ವಜರಲ್ಲಿ ಒಬ್ಬರು ಮಾತ್ರ ನೋಡಿದ್ದಾರೆ. ನಾನೀಗ ಮುದುಕನಾಗಿಬಿಟ್ಟೆನು. ಇಲ್ಲದಿದ್ದರೆ ನಾನೊಬ್ಬನೇ ಅಲ್ಲಿಗೆ ಹೋಗಿಬಿಡುತ್ತಿದ್ದೆನು " ಎಂದನು ಮುದುಕ.

ಮುದುಕನು ಹೇಳಿದುದನ್ನು ಕೇಳಿ ಚಂದ್ರವರ್ಮನು ನಕ್ಕು, " ಸರಿ. ಈ ಪಟವನ್ನು ನನಗೆ ಕೊಡು, ನಾನೇ ಸ್ವತಃ ಈ ಕಂಚುಕೋಟೆಯನ್ನು ಹುಡುಕುತ್ತಾ ಹೋಗುತ್ತೇನೆ. ಬೇರೆ ಕೆಲಸ ನನಗೇನಿದೆ ? ನಿನ್ನ ಮಗ ದೇವಲನನ್ನು ಕೂಡಾ ಕರೆದುಕೊಂಡು ಹೋಗುತ್ತೇನೆ. ನೀನು ಆ ಗುಡಿಸಲಿನಲ್ಲಿ ಕ್ಷೇಮವಾಗಿರಬಹುದು. ಚಂದ್ರಪುರದ ರಾಜನಾದ ಶಿವಸಿಂಹನೊಂದಿಗೆ ಎಲ್ಲಾ ಸಂಗತಿಗಳನ್ನೂ ಮಾತಾಡಿ, ನಾನೂ ನಿನ್ನ ಕುಮಾರನೂ ತಿರುಗಿ ಬರುವವರೆಗೂ ನಗರದಲ್ಲೇ ನಿನಗೆ ಎಲ್ಲಾ ವಸತಿಗಳೂ ಇರುವ ಹಾಗೆ ಏರ್ಪಡಿಸುತ್ತೇನೆ " ಎಂದನು.

ಮುದುಕನು ಸಂತೋಷದಿಂದ ಕೊಡುವುದಕ್ಕೆ ಬದಲಾಗಿ ಬೇರೆ ಉಪಾಯವಿಲ್ಲದವನಂತೆ ಚಿತ್ರಪಟವನ್ನು ಚಂದ್ರವರ್ಮನಿಗೆ ಕೊಟ್ಟು, " ಇದರಲ್ಲಿ ಮೋಸಗೀಸ ಮಾಡದಿರಪ್ಪಾ ! ಆತ್ಮಸಾಕ್ಷಿಗೆ ಹೆದರಿಕೊಂಡಿರು. ಈ ಮುದುಕನಿಗೆ ಮೋಸ ಮಾಡುವುದು ಮಹಾ ಪಾಪವೆಂದು ನೆನಪಿಟ್ಟುಕೋ. ನಂಬಿದ್ದೇನೆ " ಎಂದನು.

" ನಿನ್ನನ್ನೂ ನಿನ್ನ ಮಗನನ್ನೂ ನಾನೆಂದಿಗೂ ಮೋಸಪಡಿಸಲಾರೆನು. ರಾಜನಾದ ಶಿವಸಿಂಹನನ್ನು

ಕೂಡಾ ಅವನು ಸನ್ಮಾರ್ಗದವನಾಗಿದ್ದರೆ ಮೋಸ ಮಾಡುವುದಿಲ್ಲ. 'ಇಷ್ಟೇ ಅಲ್ಲದೆ..." ಎಂದು ಚಂದ್ರವರ್ಮನು ಮಾತು ಮುಗಿಸುವುದಕ್ಕೆ ಮೊದಲೇ ಜೋರಾಗಿ ಕುದುರೆಯ ಹೇಷಾರವ ಕೇಳಿಸಿತು. ಅವನು ಮರಗಳೆಡೆಯಿಂದ ಕಲ್ಲುರಾಶಿಯ ಗುಡ್ಡದ ಕಡೆಗೆ ಹಣಿಕಿ ನೋಡಿದನು.

ರಾಜಭಟರ ನಾಯಕನು ತನ್ನ ಕುದುರೆಯನ್ನು ಆ ಗುಡ್ಡದ ಮೇಲಕ್ಕೆ ಏರಿಸಿ ಗುಡಿಸಲಿರುವ ಕಡೆಗೆ ಬರುತ್ತಿದ್ದನು.

ಅದನ್ನು ನೋಡಿ ಚಂದ್ರವರ್ಮನು ಮುದುಕನ ಕಡೆಗೆ ತಿರುಗಿ "ನಾನು ರಾಜಭಟರನ್ನು ಕರೆದುಕೊಂಡು ರುದ್ರಪುರದ ಕಡೆಗೆ ಹೋಗಿ ರಾಜನನ್ನು ಸಂಧಿಸುತ್ತೇನೆ. ನೀನು ಪ್ರಸ್ತುತ ಈ ಗುಡಿಸಲಿನಲ್ಲೇ ಇರಬಹುದು. ನಾನು ಬೇಗದಲ್ಲೇ ನಿನಗಾಗಿ ಮಾಡುವುದನ್ನು ಮಾಡುತ್ತೇನೆ. ಆಗ ನೀನು ನಗರಕ್ಕೆ ಬಂದು ಅಲ್ಲಿಯೇ ಹಾಯಾಗಿ ವಾಸಮಾಡಬಹುದು" ಎಂದು ಹೇಳಿ ಭಟರ ನಾಯಕನಿಗೆ ಇದಿರಾಗಿ ಹೋದನು.

ಚಂದ್ರವರ್ಮನು ತನ್ನ ಕಡೆಗೇ ಬರುವುದನ್ನು ನೋಡಿ ಭಟರ ನಾಯಕನು ಕುದುರೆಯಿಂದ ಇಳಿದು, "ಅಯ್ಯಾ, ತಾವು ಎಷ್ಟು ಹೊತ್ತಾದರೂ ಬಾರದಿರುವುದನ್ನು ನೋಡಿ ನಾನೇ ಹೊರಟು ಬಂದೆನು. ಈ ಕುದುರೆ ನಿಮಗಾಗಿಯೇ ತಂದಿದ್ದೇನೆ. ನನಗೆ ಬೇರೆ ಕುದುರೆಯಿದೆ. ನೀವು ನಗರಕ್ಕೆ ಬರುವಿರೆಂದು ವಾರ್ತೆ ಕೂಡಾ ಕಳುಹಿಸಿದ್ದೇನೆ" ಎಂದನು.

"ನಾನು ಕೆಲವು ಶಕ್ತಿಗಳನ್ನು ಆವಾಹನೆ ಮಾಡಲು ಕಾಡಿನೊಳಗೆ ಹೋದೆನು. ನಿಮ್ಮ ರಾಜನನ್ನು ಕುರಿತು ಆ ಶಕ್ತಿಗಳಲ್ಲಿ ಒಂದು ಕೂಡಾ ಒಳ್ಳೇ ಮಾತು ಹೇಳದಿರುವುದನ್ನು ನೋಡಿ ನನಗೆ ಆಶ್ಚರ್ಯವಾಯಿತು. ನಿಮ್ಮ ರಾಜನು ಅಷ್ಟು ದುಷ್ಟನಾಗಿರುವನೇನು ? ಒಂದು ವೇಳೆ ನನ್ನ ಗುರುಗಳು ಹೇಳಿದ



ಶಿವಸಿಂಹನೆಂಬ ಬೇರೆ ಯಾವ ರಾಜನಾದರೂ ಇರುವನೋ ?" ಎಂದನು ಚಂದ್ರವರ್ಮ.

"ಹಾಗೆ ಮಾತ್ರ ಇಲ್ಲ. ಆದರೆ ನಮ್ಮ ರಾಜನು ದುಷ್ಟನೋ ಒಳ್ಳೆಯವನೋ ಕೇವಲ ಭಟರಾದ ನಮಗೆ ಹೇಗೆ ತಿಳಿಯುತ್ತದೆ ? ಆ ಸಂಗತಿ ಪ್ರಜೆಗಳಿಗೂ ನೆರೆಯ ರಾಜರಿಗೂ ತಿಳಿಯಬೇಕು. ನಮಗೆ ಬೇಕಾದುದೆಲ್ಲಾ ತಿಂಗಳು ತಪ್ಪದೆ ಸಂಬಳವೂ ಭತ್ಯಗಳೂ. ಅವುಗಳು ಸರಿಯಾಗಿ ಬರುತ್ತಿದ್ದರೆ ರಾಜನು ಒಳ್ಳೆಯವನು, ಇಲ್ಲದಿದ್ದರೆ ಕೆಟ್ಟವನು. ಅಷ್ಟೇ ಹೇಳಬಹುದು" ಎಂದನು ಭಟರ ನಾಯಕ.

ಭಟನಾಯಕನ ಮಾತಿನಿಂದ, ಚಂದ್ರವರ್ಮನಿಗೆ ತಾನು ಶಿವಸಿಂಹನೊಂದಿಗೆ ಬಹಳ ಎಚ್ಚರಿಕೆಯಲ್ಲಿರಬೇಕೆಂದು ಅರ್ಥವಾಯಿತು. ಕಂಚುಕೋಟೆಗೆ ಹೋಗಿ ಸೇರಬೇಕಾದರೆ ತನಗೆ ಸ್ವಲ್ಪ ಜನಸಹಾಯವೂ ಬೇಕು. ಅದು ಶಿವಸಿಂಹನಂತಹ ರಾಜನಿಂದಲೇ ಲಭಿಸುವಂತಹುದು. ಒಬ್ಬನೇ ಕಂಚುಕೋಟೆಗೆ

ಹೋಗಲು ನೋಡುವುದೆಂದರೆ ಆತ್ಮಹತ್ಯೆಗೆ ಸಮಾನವೇ ಆದೀತು! ದಾರಿಯಲ್ಲಿ ಎಷ್ಟೋ ಅಪಾಯಗಳನ್ನು ಇದಿರಿಸಬೇಕಾಗುತ್ತದೆ. ಆದುದರಿಂದ ಅಲ್ಲಿಗೆ ಹೋಗಲು ಯಾರೂ ಪ್ರಯತ್ನಿಸುವುದಿಲ್ಲ. ಈಗ ತಾನು ಶಿವಸಿಂಹನೊಂದಿಗೆ ನಿಜವನ್ನೇ ಹೇಳಿಬಿಟ್ಟರೆ ಮೂಲಕ್ಕೇ ಗಂಡಾಂತರ ಬರಬಹುದು. ಈ ರಾಜಭಟರನ್ನು ನಂಬಿಸಿದ ಹಾಗೆಯೇ ಆ ಶಿವಸಿಂಹನನ್ನೂ ತಾನು ದೊಡ್ಡ ಮಂತ್ರಶಕ್ತಿಯುಳ್ಳವನೆಂದು ನಂಬಿಸಬೇಕು.

ಹೀಗೆ ಚಂದ್ರವರ್ಮನು ನಿಶ್ಚಯಿಸುವಷ್ಟರಲ್ಲಿ ಭಟರ ನಾಯಕನು, "ಅಯ್ಯಾ, ಇನ್ನು ನಾವು ನಮ್ಮ ರಾಜನ ಬಳಿಗೆ ಹೊರಡೋಣವೆ ?" ಎಂದು ಕುದುರೆಯನ್ನು ಅವನ ಹತ್ತಿರ ಸರಿಸಿದನು. ಚಂದ್ರವರ್ಮನು ಕಡಿವಾಣ ಹಿಡಿದುಕೊಂಡು ಕುದುರೆಯ ಮೇಲೆ ಹತ್ತಿದನು.

ಸ್ವಲ್ಪ ದೂರ ಕಾಡುದಾರಿಯಲ್ಲಿಯೂ, ಸ್ವಲ್ಪ ದೂರ ಕಣಿವೆಯ ದಾರಿಯಲ್ಲಿಯೂ ಪ್ರಯಾಣಿಸಿ ಚಂದ್ರವರ್ಮನೂ ರಾಜಭಟರೂ ಎರಡು ಗಂಟೆಗಳ ಮೇಲೆ ರುದ್ರಪುರವನ್ನು ತಲಪಿದರು. ನಗರದ್ವಾರಗಳೂ, ಬೀದಿಗಳೂ ತಳಿರು ತೋರಣಗಳಿಂದ ಅಲಂಕರಿಸಲ್ಪಟ್ಟಿದ್ದುವು. ರಾಜಮಾರ್ಗದ ಎರಡು ಬದಿಗಳಲ್ಲಿಯೂ ನಗರವಾಸಿಗಳು ಸಾಲುಗಟ್ಟಿ ನಿಂತಿದ್ದರು. ಚಂದ್ರವರ್ಮನು ರಾಜಭಟರೊಂದಿಗೆ ದೊಡ್ಡದೊಂದು ರಾಜಬೀದಿಗೆ ಬಂದಾಗ ಜನರ ಗುಂಪಿನಿಂದ ಕರತಾಳದ ಧ್ವನಿಗಳೂ, "ಮಹಾ ಮಾಂತ್ರಿಕರಿಗೆ ಜೈ" ಎಂಬ ಜಯಾಕಾರವೂ ಹೊರಟುವು.

ಆ ಕೂಗನ್ನು ಕೇಳಿ ಚಂದ್ರವರ್ಮನಿಗೆ ಕಕ್ಕಾಬಿಕ್ಕಿಯಾದಂತೆನಿಸಿತು. ತಾನು ಮಹಾ ಮಾಂತ್ರಿಕನೇ ? ಇದು ಬಹಳ ವಿಚಿತ್ರವಾಗಿದೆಯೆಂದುಕೊಂಡನು. ಭಟರ ನಾಯಕನು ಹೇಳಿದ ಮಾತು ಅವನ ನೆನಪಿಗೆ ಬಂದಿತು. ಈ ಮೊದಲು ಅವನು ಅಂಗೈಯನ್ನು ಪರೀಕ್ಷಿಸಿ ನೋಡಿ, ಮುದುಕನನ್ನು ಕುರಿತೂ, ಕಂಚು ಕೋಟೆಗೆ ಹೋಗುವ ಮಾರ್ಗವನ್ನು ಕುರಿತೂ ಹೇಳಿದ ಮಾತುಗಳು ಭಟರ ನಾಯಕನಿಗೆ ಅತ್ಯದ್ಭುತವಾಗಿ ತೋರಿದೆ. ಆ ಕಾರಣದಿಂದಲೇ ಅವನು ರಾಜನಿಗೆ ತಾನು ದೊಡ್ಡ ಮಾಂತ್ರಿಕನೆಂದು ಸುದ್ದಿ ಕಳುಹಿಸಿದ್ದಾನೆ. ತನ್ನನ್ನು ಇಂತಹ ಮರ್ಯಾದೆಗಳಿಂದಲೂ, ಮುಖಸ್ತುತಿಗಳಿಂದಲೂ ವಶಪಡಿಸಲಿಕ್ಕೆ ರಾಜನು ಈ ಏರ್ಪಾಡುಗಳನ್ನೆಲ್ಲಾ ಮಾಡಿದ್ದಾನೆಂದು ಅವನಿಗೆ ಗೊತ್ತಾಯಿತು. ಇದಕ್ಕೆ ಸರಿಯಾಗಿಯೇ ತಾನೂ ಪ್ರವರ್ತಿಸಬೇಕಾಗಿ ಬಂದಿದೆ.

ಹೀಗೆ ಬಹಳ ಆಲೋಚನೆಗಳಿದ್ದುವು ಚಂದ್ರವರ್ಮನ ತಲೆಯಲ್ಲಿ. —(ಇನ್ನೂ ಇದೆ)





# ಫಲಿಸುವ ಕನಸುಗಳು

ತನ್ನ ತಲೆಯೊಡೆಯುವವರೆಗೂ ಬಿಡಲಾರೆನೆಂಬ ಹಟತೊಟ್ಟಂತೆ ರಾಜಾತ್ರಿವಿಕ್ರಮನು ಮರದ ಬಳಿಗೆ ಹೋಗಿ, ಕೊಂಬೆಯಲ್ಲಿ ನೇತಾಡುತ್ತಿದ್ದ ಶವವನ್ನು ಕೆಳಗಿಳಿಸಿ, ತನ್ನ ಭುಜಸ್ಕಂಧದ ಮೇಲೆ ಏರಿಸಿಕೊಂಡು ಎಂದಿನಂತೆ ಮೌನವಾಗಿ ಸ್ಮಶಾನದ ಕಡೆಗೆ ನಡೆಯತೊಡಗಿದನು. ಆಗ ಶವದೊಳಗಿನ ಬೇತಾಳವು ಮಾತಾಡಲು ತೊಡಗಿ, "ರಾಜಾ, ಈ ಅರ್ಧರಾತ್ರಿಯ ಹೊತ್ತಿನಲ್ಲಿ ನಿದ್ದೆಗೆಟ್ಟು ನೀನು ಮಾಡುವ ಕೆಲಸವನ್ನು ನೋಡುತ್ತಿದ್ದರೆ, ನೀನು ಅಸಹಾಯಶೂರನೆನ್ನಲು ಯಾವ ಸಂದೇಹವೂ ಇಲ್ಲ. ಒಂದು ವಿಷಯ ನೆನಪಾಗುತ್ತದೆ. ಕೆಲವು ಘನಕಾರ್ಯ ಮಾಡುವುದಕ್ಕೆ ಶೂರತ್ವಕ್ಕಿಂತಲೂ ವಿವೇಕ ಮತ್ತು ವಿಚಕ್ಷಣಜ್ಞಾನವೂ ಬೇಕಾಗುವುದುಂಟು. ಅವುಗಳು ಲೋಪಿಸಿಬಿಟ್ಟರೆ, ಸಾಧಿಸಿದ್ದೆಲ್ಲವೂ ಗಂಗಾನದಿಯ ಪಾಲಾದಂತೆಯೇ ಆದೀತು. ವಿಶಾಖನ ಕಥೆ ಇದಕ್ಕೆ ಒಳ್ಳೆಯ ಸಾಕ್ಷಿ. ಆ ಕಥೆಯನ್ನು ಮನಸ್ಸುಕೊಟ್ಟು ಕೇಳು. ನಡೆಯುವ ಶ್ರಮ ಗೊತ್ತಾಗಲಾರದು" ಎಂದು ಹೇಳಿ ಕಥೆಯನ್ನು ಪ್ರಾರಂಭಮಾಡಿತು :

## ಬೇತಾಳ ಕಥೆಗಳು



ಪಾಟಲೀಪುತ್ರದಲ್ಲಿ ಜಯನಂದನೆಂಬೊಬ್ಬ ಧನಿಕ ವರ್ತಕನಿದ್ದನು. ಅವನ ಮನೆಯಲ್ಲಿ ವಿಶಾಖನೆಂಬ, ಆ ಧನಿಕನ ದೂರದ ಬಂಧುವೊಬ್ಬನು, ಒಳ್ಳೆಯ ರೀತಿಯಲ್ಲಿ ಬದುಕಿ ಹೀನಾವಸ್ಥೆಗೆ ಬಂದ ಕಾರಣ ದಿಂದಾಗಿ, ಬೇರೆ ದಾರಿ ಕಾಣದೆ ದಿನ ಕಳೆಯುತ್ತಿದ್ದನು.

ವಿಶಾಖನು ರೂಪದಲ್ಲಿ ಅಂದಗಾರನಾಗಿದ್ದು, ಒಳ್ಳೆಯ ಚುರುಕು ಚಟುವಟಿಕೆಗಳುಳ್ಳವನಾದರೂ, ಕಾಲವು ಕೂಡಿಬಾರದೆ ಅಲ್ಲಿ ಸೇವಕನ ಹಾಗೆ ಬದುಕುವ ಹಾಗಾಗಿದ್ದನು. ಅವನು ತನ್ನ ದುರದೃಷ್ಟ ವನ್ನು ಹಳಿದುಕೊಳ್ಳುತ್ತ ಕುದಿದುಕೊಂಡಿದ್ದನು.

ಅವನ ಧ್ಯಾನವು ಯಾವಾಗಲೂ, ತಾನು ಜಯನಂದನಷ್ಟು ದೊಡ್ಡ ಧನವಂತನು ಹೇಗೆ ಆಗುವೆನೋ, ಏನು ಮಾಡಿದರೆ ಆಗಬಹುದೋ ಎಂಬುದರ ಮೇಲೆಯೇ ತಿರುಗಿಕೊಂಡಿತ್ತು. ಅದರಿಂದಾಗಿ ಅವನು ಇಲ್ಲಸಲ್ಲದುದನ್ನು ಆಲೋಚಿಸಿ ಹಗಲುಗನಸು ಕಂಡುಕೊಂಡೇ ಇರುವನು.

ಒಂದು ದಿನ ಮಧ್ಯಾಹ್ನದ ಹೊತ್ತಿನಲ್ಲಿ ತೀರಿಕೆಯ ವೇಳೆಯಾದುದರಿಂದ ವಿಶಾಖನು ಮನೆಯಲ್ಲಿ ಒಂದು ಕಡೆ ಕುಳಿತುಕೊಂಡು ತೂಕಡಿಸುತ್ತಿದ್ದನು. ಆ ತಂದ್ರಾವಸ್ಥೆಯಲ್ಲಿ ಅವನಿಗೊಂದು ಕನಸು ಬಿದ್ದಿತು. ಅದರಲ್ಲಿ ಅವನು ಜಯನಂದ ಸಾಹುಕಾರನಿಗಿಂತಲೂ ಭಾರಿ ದೊಡ್ಡ ಶ್ರೀಮಂತನಾಗಿದ್ದಾನೆ. ಜಯನಂದನು ಇದ್ದ ಆಸ್ತಿಪಾಸ್ತಿಗಳನ್ನೆಲ್ಲ ಕಳೆದುಕೊಂಡು ಬಿಕಾರಿ ಯಾಗಿ ತನ್ನ ಮನೆಗೆ ಬಂದು ತನ್ನ ದಯದಿಂದ ಸೇವಕ ನಾಗಿ ಕೆಲಸ ಮಾಡುತ್ತಿದ್ದಾನೆ. ವಿಶಾಖನು ಎಷ್ಟು ಹೊತ್ತಾದರೂ ಅವನನ್ನು ಸಮೀಪದಲ್ಲಿ ಕಾಣದೆ, 'ಲೋ ಜಯನಂದಾ, ಎಲ್ಲಿ ಸತ್ತೆಯೋ !' ಎಂದು ಕರೆಯುವಂತೆ ಕನಸುಕಂಡು ಗಟ್ಟಿಯಾಗಿ ಕೂಗಿದನು.

ವಿಶಾಖನ ದುರದೃಷ್ಟದಿಂದಲೋ ಏನೋ, ಆ ಸಮಯದಲ್ಲಿ ಜಯನಂದನು ಸಮೀಪದಲ್ಲೇ ಇದ್ದನು. ಅವನು ವಿಶಾಖನ ಮಾತುಗಳನ್ನು ಕೇಳಿ ಕೋಪದಿಂದ ಕಣ್ಣು ತಿರುಗಿಸಿಕೊಂಡು ಬಂದು ನಿದ್ದೆಯಿಂದ ಎಳೆದೆಬ್ಬಿಸಿ, ಬೆನ್ನಿಗೆ ನಾಲ್ಕು ಏಟುಗಳನ್ನು ಕೊಟ್ಟು ಬೀದಿಗೆ ದೂಡಿದನು.

ಅದನ್ನು ನೋಡಿ ಮನೆಯಲ್ಲಿದ್ದ ಜಯನಂದನ ಬಂಧುಬಳಗದವರೂ, ದಾಸದಾಸಿಯರೂ ವಿಶಾಖನನ್ನು ಗೇಲಿಮಾಡುತ್ತ ನಗಾಡಿದರು. ಆ ಅವಮಾನವನ್ನು ತಾಳಲಾಗದೆ ವಿಶಾಖನು ಪಾಟಲಿಪುತ್ರವನ್ನು ಬಿಟ್ಟು ಅರಣ್ಯಕ್ಕೆ ಹೋದನು.

ಎಲ್ಲಿಗೆ ಹೋಗುವುದೆಂಬ ಉದ್ದೇಶವೇನಿಲ್ಲದೆ ಅವನು ಕಾಡಿನೊಳಗೆ ಸ್ವಲ್ಪದೂರ ಹೋದಾಗ, ಒಂದು ಕಡೆಯಲ್ಲಿ ತಪೋನಿಷ್ಠೆಯಲ್ಲಿರುವ ಮುನಿ ಯೊಬ್ಬನನ್ನು ಕಂಡನು. ಅವನು ಮುನಿಯ ಮುಂದೆ ಸಾಷ್ಟಾಂಗ ನಮಸ್ಕಾರವಾಗಿ ಬಿದ್ದನು.

ಸ್ವಲ್ಪ ಹೊತ್ತಿನ ಮೇಲೆ ಮುನಿ ಕಣ್ಣು ಬಿಡಿಸಿ, ವಿಶಾಖನನ್ನು ನೋಡಿ, "ಅಪ್ಪಾ, ನನ್ನಿಂದ ನಿನಗೆ ಏನಾಗಬೇಕು ?" ಎಂದು ಶಾಂತಸ್ವರದಲ್ಲಿ ಕೇಳಿದನು.



ವಿಶಾಖನು ಎದ್ದು ಬಹಳ ವಿನಯದಿಂದ ನಡೆದ ಸಂಗತಿಯನ್ನೆಲ್ಲಾ ಹೇಳಿ, "ಮಹಾತ್ಮರೇ, ದಯ ಮಾಡಿ ನನಗೆ ಜಯನಂದನು ದಾಸನಾಗುವ ಹಾಗೆ ವರವನ್ನು ಕೊಡಬೇಕೆಂದು ಬೇಡುತ್ತೇನೆ" ಎಂದು ಕೇಳಿಕೊಂಡನು.

ಮುನಿ ತನ್ನ ದಿವ್ಯಶಕ್ತಿಯಿಂದ ಜಯನಂದ ಸಾಹುಕಾರನ ಪೂರ್ವಾಪರಗಳನ್ನೆಲ್ಲಾ ನೆನೆದು ನೋಡಿಕೊಂಡು, "ಆ ಜಯನಂದನು ಸ್ವತಃ ಕಷ್ಟಪಟ್ಟು ಕೆಲಸಮಾಡಿ, ತನ್ನ ಶಕ್ತಿಯುಕ್ತಿಗಳಿಂದ ಇಷ್ಟೊಂದು ಧನವಂತನಾಗಿದ್ದಾನೆ. ನೀನು ಯಾವ ಕಷ್ಟ ಕೆಲಸಗಳನ್ನೂ ಮಾಡದೆ ಅವನಷ್ಟು ದೊಡ್ಡ ಧನಿಕನಾಗಬೇಕೆಂದು ಕನಸು ಕಾಣುತ್ತಿರುವಿ. ನಿದ್ದೆಯ ಕಾಲದಲ್ಲಿ ಕನಸುಗಳು ಬೀಳುವುದು ಎಷ್ಟು ಸಹಜವೋ ಕನಸಿನಲ್ಲಿ ಕಂಡುದೆಲ್ಲವೂ ನಿಜವಲ್ಲದೆ ಹೋಗುವುದು ಕೂಡಾ ಅಷ್ಟೇ ಸಹಜ. ಈ ದಿನದಿಂದ ನೀನು ಸ್ವಂತ ಪ್ರಯತ್ನದಿಂದ ಒಳ್ಳೆಯ ರೀತಿಯಲ್ಲಿ ಮೇಲೇರಲು ಪ್ರಯತ್ನ ಮಾಡು" ಎಂದನು.

ಮುನಿ ಹೇಳಿದ ಹಿತವಚನಗಳನ್ನು ಕೇಳಿ, ವಿಶಾಖನು ಬೇಸರಪಟ್ಟು, "ಮಹಾತ್ಮರೇ, ತಾವು ಹೇಳಿದ ಮಾತುಗಳಲ್ಲಿ ಎಲ್ಲರಿಗೂ ತಿಳಿದಿರುವ ನೀತಿಯೇ ಇದೆ. ಹೊಸತನವೇನೂ ಇಲ್ಲ. ತಪೋ ಮಹಿಮೆಯುಳ್ಳವರಾದ ತಾವು, ನಾನು ಕಾಣುವ ಕನಸುಗಳೆಲ್ಲ ನಿಜವಾಗುವಂತೆ ಮಾಡಿದರೆ ಸಂತೋಷಿ ಸುತ್ತೇನೆ, ಸ್ವಾಮಿ" ಎಂದನು.

ಅದನ್ನು ಕೇಳಿ ಮುನಿ ಮಂದಹಾಸವಾಗಿ, "ಅದು ಬಹಳ ಸಣ್ಣ ಸಂಗತಿ. ನಿನಗೆ ಬಂದ ಸ್ವಪ್ನಗಳು ನಿಜವಾಗಬೇಕೆಂದುಕೊಳ್ಳುತ್ತ, ಈ ಮಂತ್ರವನ್ನು ಆರುಸಾರಿ ಮನಸ್ಸಿನೊಳಗೇ ಜಪಿಸಿಕೋ. ನೀನು ಸ್ವಪ್ನದಲ್ಲಿ ನೋಡಿದುದೆಲ್ಲಾ ನಿಜವಾಗಿ ಬಿಡುತ್ತವೆ" ಎಂದು ಹೇಳಿ ಮುನಿ ವಿಶಾಖನ ಕಿವಿಯಲ್ಲಿ ಯಾವುದೋ ಒಂದು ದಿವ್ಯ ಮಂತ್ರವನ್ನು ಉಪದೇಶಿಸಿದನು.

ವಿಶಾಖನು ಸಂತೋಷದಿಂದ ಹೊರಡಲು ತಯಾರಾದಾಗ ಮುನಿ ಅವನೊಂದಿಗೆ, "ಒಂದು ಸಂಗತಿ ಹೇಳಬೇಕಾಗಿದೆಯಪ್ಪ, ನಿಲ್ಲು. ಈ ಮಂತ್ರವು ನಿನಗೆ ಮೂರುಸಾರಿ ಮಾತ್ರವೇ ಉಪಯೋಗವಾಗುವಂಥಾದ್ದು. ಆದುದರಿಂದ ಬುದ್ಧಿ ಕುಶಲತೆಯಿಂದ ಇದನ್ನು ಉಪಯೋಗಿಸಬೇಕು, ಮರೆಯಬೇಡ. ಇದರ ಉಪಯೋಗ ನಿನಗೊಬ್ಬನಿಗೇ ಅಲ್ಲದೆ ಹತ್ತು ಮಂದಿಗೆ ಪ್ರಯೋಜನವಾಗುವ ಹಾಗೆ ನೋಡಿಕೋ" ಎಂದನು.

ವಿಶಾಖನು ಪಾಟಲೀಪುತ್ರಕ್ಕೆ ಹಿಂದಿರುಗಿ ಬಂದನು. ಆಗ ರಾತ್ರಿಯಾಗಿತ್ತು. ಆದುದರಿಂದ ಅವನು ಒಂದು ಛತ್ರದ ಜಗಲಿಯ ಮೇಲೆ ಮಲಗಿ ಮುನಿ ಉಪದೇಶ ಮಾಡಿದ ಮಂತ್ರವನ್ನು ಕುರಿತು ಆಲೋಚನೆ ಮಾಡಿಕೊಂಡಿದ್ದನು. ಹಾಗೆಯೇ ಸ್ವಲ್ಪ

ಹೊತ್ತಿಗೆಲ್ಲಾ ಅವನಿಗೆ ನಿದ್ದೆ ಬಂದಿತು. ಆ ನಿದ್ದೆಯಲ್ಲಿ ಅವನಿಗೊಂದು ಕನಸು. ಜಯಾನಂದ ಸಾಹುಕಾರನು ಅವನ ಮುಂದೆ ಬಂದು ಕ್ಷಮೆ ಕೇಳಿಕೊಂಡನು. ಅಷ್ಟೇ ಅಲ್ಲದೆ ಮನೆಗೆ ಕರೆದುಕೊಂಡು ಹೋಗಿ ತನ್ನ ಕುಮಾರಿಯನ್ನು ಅವನು ಮದುವೆ ಮಾಡಿಕೊಳ್ಳಬೇಕೆಂತಲೂ ಕೇಳಿಕೊಂಡಿದ್ದಾನೆ.

ವಿಶಾಖನು ಬೆಚ್ಚಿಬಿದ್ದು ಎಚ್ಚರಕ್ಕೆ ಬಂದು, ತನಗೆ ಬಂದ ಕನಸನ್ನು ಮೆಲುಕು ಹಾಕತೊಡಗಿದನು. ಈ ಬಗೆಯ ಕನಸು ಅವನಿಗೇನೂ ಹೊಸತಾಗಿರಲಿಲ್ಲ. ಆದರೂ ಮಂತ್ರದ ಪ್ರಭಾವವನ್ನು ಪರೀಕ್ಷಿಸಲಿಕ್ಕಾಗಿ ಇದಕ್ಕಿಂತ ಒಳ್ಳೆಯ ಅವಕಾಶವಿಲ್ಲವೆಂದು ತೋರಿತು.

ಅಂತಲೇ ಅವನು ಮುನಿ ಉಪದೇಶ ಮಾಡಿದ ಮಂತ್ರವನ್ನು ಆರುಸಾರಿ ಜಪಿಸಿಕೊಂಡು ನಿದ್ದೆಯ ಮತ್ತು ಇನ್ನೂ ಪೂರ್ತಿಯಾಗಿ ಬಿಡದಿದ್ದುದರಿಂದ, ಮತ್ತೆ ಕಣ್ಣುಮುಚ್ಚಿ ಒರಗಿಕೊಂಡನು. ಸ್ವಲ್ಪ ಹೊತ್ತಿಗೆಲ್ಲಾ ಸಮೀಪದಲ್ಲಿ ಏನೋ ಶಬ್ದವಾದುದರಿಂದ ಎದ್ದು ಕುಳಿತು ಕಣ್ಣುಬಿಡಿಸಿ ನೋಡಿದನು. ಅವನಿಗಾದ ಆಶ್ಚರ್ಯ ಅಷ್ಟಿಷ್ಟೆನ್ನುವಂತಿಲ್ಲ. ಅವನ ಇದಿರಿನಲ್ಲಿ ಜಯಾನಂದನು ಪರಿವಾರದೊಂದಿಗೆ, ಮೇಳತಾಳ ವಾದ್ಯಗಾರರ ಮಧ್ಯದಲ್ಲಿ ಅವನ ಹತ್ತಿರ ಬರುತ್ತಿದ್ದನು.

ವಿಶಾಖನು ತನಗಾದ ಆಶ್ಚರ್ಯದಿಂದ ಸ್ತಿಮಿತಕ್ಕೆ ಬರುವುದರೊಳಗೆ ಜಯಾನಂದನು ಅವನೊಂದಿಗೆ, "ಅಪ್ಪಾ, ವಿಶಾಖಾ, ನಡೆದುದೇನೋ ನಡೆದು ಹೋಯಿತು. ಮನೆಗೆ ಹಿಂದಿರುಗಿ ಬಾರಪ್ಪಾ. ಇದೇ ಈಗ ಸ್ವಲ್ಪಹೊತ್ತಿನ ಮೊದಲು ನಮ್ಮ ಕುಲದೇವತೆ ನನ್ನ ಕನಸಿನಲ್ಲಿ ಬಂದು ನೀನು ಇಲ್ಲಿರುವ ಸಂಗತಿ ಹೇಳಿದಳು. ಅಷ್ಟೇ ಅಲ್ಲ, ಕೂಡಲೇ ಸಕಲ ಮರ್ಯಾದೆಗಳಿಂದ ನಿನ್ನನ್ನು ಕರೆದುಕೊಂಡು ಬಂದು ನನ್ನ ಅಳಿಯನನ್ನಾಗಿ ಮಾಡಿಕೊಳ್ಳುವಂತೆ ಕುಲದೇವತೆಯ ಆಜ್ಞೆಯಾಗಿದೆ. ಅದಕ್ಕೇ ಮಂಗಳಾಹ್ವಾನದೊಂದಿಗೆ ಕರೆದುಕೊಂಡು ಹೋಗಲು ಬಂದೆನು. ಹೋಗೋಣ, ಬಾರಪ್ಪಾ" ಎಂದನು.



ವಿಶಾಖನು ಫಕ್ಕನೆ ಒಪ್ಪಿಬಿಡಲಿಲ್ಲ. ಅದೇನೂ ತನಗೆ ಬೇಕಾಗಿಲ್ಲವೆಂದು ಸ್ವಲ್ಪ ಹಟ ತೋರಿಸಿ, ಬಹಳ ಒತ್ತಾಯ ಮಾಡಿದ ಮೇಲೆ ಜಯಾನಂದನೊಂದಿಗೆ ಹೊರಟನು. ಆಮೇಲೆ ಬಹು ವೈಭವದಿಂದ ಕುಮಾರಿ ಮಾಲಿನಿಯನ್ನು ವಿಶಾಖನಿಗೆ ಕೊಟ್ಟು ಮದುವೆಯನ್ನೂ ಮಾಡಿದನು.

ಮದುವೆಯಾದ ಮೇಲೆ ಮಾವನ ಮನೆಯಲ್ಲೇ ಇದ್ದುಬಿಟ್ಟ ವಿಶಾಖನಿಗೆ ಕೆಲವು ತೊಂದರೆಗಳು ಇದಿರಾದುವು. ಹಿಂದೆ ಅವನು ತಮ್ಮ ಮನೆಯಲ್ಲಿ ಸೇವಕನಾಗಿ ಬದುಕಿದವನೆಂಬ ಅಲ್ಪತನವನ್ನು ಅವನ ಬಾವ ಮೈದುನಂದಿರು ಮರೆಯಲಾರದೆ ಪ್ರವರ್ತಿಸುತ್ತಿದ್ದರು. ದಾಸದಾಸಿಯರು ಕೂಡಾ ಅವನನ್ನು ಹಿಡಿದ ಆಕಸ್ಮಿಕ ಅದೃಷ್ಟವನ್ನು ನೋಡಿ ಅಸೂಯೆ ಪಡುತ್ತಿದ್ದರು.

ಇದನ್ನೆಲ್ಲ ಗಮನಿಸಿಕೊಂಡಿದ್ದ ಜಯಾನಂದನು ಒಂದು ದಿನ ವಿಶಾಖನೊಂದಿಗೆ, "ನೀನು ನನ್ನ ಅಳಿಯನೆಂದು ಹತ್ತು ಜನರು ಹೇಳಿಕೊಳ್ಳುವುದಕ್ಕಿಂತಲೂ, ನಾನು ನಿನಗೆ ತಕ್ಕ ಮಾವನೆಂದು ಹೇಳಿಕೊಳ್ಳಲು ನನಗೆ ಹೆಚ್ಚು ಸಂತೋಷವೆನಿಸುತ್ತದೆ. ನಿನಗೆ ಬೇಕಾದಷ್ಟು ಧನ ಕೊಡುತ್ತೇನೆ. ಸ್ವಂತವಾಗಿ ಏನಾದರೂ ವ್ಯಾಪಾರ ಪ್ರಾರಂಭ ಮಾಡಿ, ನನ್ನನ್ನು ಮೀರಿಸುವಂತಹ ಶ್ರೀಮಂತನಾಗು. ಅದಕ್ಕಿಂತ ಹೆಚ್ಚಿನ ಸಂತೋಷ ನನಗಿಲ್ಲ" ಎಂದನು.

ಇದಕ್ಕೆ ವಿಶಾಖನು ಅಂಗೀಕಾರವಿತ್ತನು. ಅವನು ವ್ಯಾಪಾರಮಾಡಲು ಬೇಕಾಗುವಷ್ಟು ಮೂಲ ಧನವನ್ನು ಜಯಾನಂದನು ಕೊಟ್ಟು ಅದಕ್ಕೆ ತಕ್ಕ ಏರ್ಪಾಡುಗಳನ್ನೂ ಮಾಡಿಸಿದನು.

ಒಂದು ದಿನ ವಿಶಾಖನು ತನ್ನ ಹೆಂಡತಿ ಮಾಲಿನಿಯೊಂದಿಗೆ, "ಮಾವಯ್ಯನಿಗೆ ನಾನು ಅವರನ್ನು ಮೀರಿಸುವ ಧನವಂತನಾಗಬೇಕೆಂದಿದೆ. ಅವರ ಇಚ್ಛೆ ನೆರವೇರಬೇಕಾದರೆ ನಾನು ಏನು ಮಾಡಬೇಕೆಂಬುದು ನನಗೆ ಗೊತ್ತಿದೆ. ಅದೇನೂ ಕಷ್ಟವಿಲ್ಲ" ಎಂದನು.





"ನೀವು ಅಷ್ಟು ದೊಡ್ಡ ಧನವಂತರಾಗದಿದ್ದರೆ ಪ್ರಯೋಜನವೇನಿದೆ ? ನಮಗಾದರೂ ಅದಕ್ಕಿಂತ ಹೆಚ್ಚು ಬೇರೇನು ಬೇಕಾಗಿದೆ ?" ಎಂದಳು ನಗುತ್ತಾ ಮಾಲಿನಿ.

ಆ ದಿನ ರಾತ್ರಿ ವಿಶಾಖನಿಗೆ, ತನ್ನ ವ್ಯಾಪಾರವು, ಮೂರು, ಆರು, ಹನ್ನೆರಡರ ಕ್ರಮದಲ್ಲಿ ವಿಸ್ತರಿಸುತ್ತ, ಮೂರು ತಿಂಗಳು ಕಳೆಯುವುದರೊಳಗೆ ಅವನು ಪಾಟಲೀಪುತ್ರದಲ್ಲಿರುವ ದೊಡ್ಡ ಧನಿಕರೊಳಗೆ ಒಬ್ಬನಾದಂತೆ ಕನಸು ಕಂಡನು.

ವಿಶಾಖನು ಪರಮಾನಂದದಿಂದ ತನ್ನ ಕನಸಿನ ಸಂಗತಿಯನ್ನು ಹೆಂಡತಿಯೊಂದಿಗೆ ಹೇಳಿದನು.

ಅದನ್ನು ಕೇಳಿ ಅವಳು ನಿರುತ್ಸಾಹಗೊಂಡು, "ಅಷ್ಟೊಂದಕ್ಕೆ ಇಷ್ಟು ದೊಡ್ಡ ಸಂತೋಷವೇ ? ಹೀಗೆ ಸ್ವಪ್ನ ಕಾಣುತ್ತ ಕುಳಿತುಕೊಂಡರೆ ಏನಾದೀತು ? ನನ್ನ ಅಪ್ಪ ವ್ಯಾಪಾರದಲ್ಲಿ ಅಷ್ಟೊಂದು ಧನಾರ್ಜನೆ ಮಾಡಬೇಕಾದರೆ, ಎಷ್ಟು ಕಷ್ಟಪಟ್ಟಿದ್ದಾರೆಂಬುದನ್ನು ಪಾಟಲೀಪುತ್ರದವರು ಕಥೆಗಳಾಗಿ ಹೇಳುತ್ತಾರೆ" ಎಂದಳು.

ಅವಳ ಮಾತು ಕೇಳಿ ವಿಶಾಖನು, ತನಗೆ ಮುನಿಯೊಬ್ಬನು ಉಪದೇಶ ಮಾಡಿದ ಮಂತ್ರದ ಸಂಗತಿಯನ್ನು ಅವಳೊಂದಿಗೆ ಹೇಳಿದನು. ಅವಳಿಗೆ ಅದು ನಂಬುಗೆಯಾಗಲಿಲ್ಲ. ಅದು ಕೂಡಾ ಅವನು ನೋಡಿದ ಸ್ವಪ್ನವಾಗಿರಬಹುದು. ಅಥವಾ ಸುಮ್ಮನೆ ಹೇಳುವ ಕಟ್ಟುಕಥೆಯಾಗಿರಲೂಬಹುದು ಎಂದುಕೊಂಡಳು. ವಿಶಾಖನು ಆರುಸಾರಿ ತನ್ನ ಮನಸ್ಸಿನಲ್ಲಿ ಆ ಮಂತ್ರವನ್ನು ಜಪಿಸಿ, ತನ್ನ ಕನಸು ನಿಜವಾಗಬೇಕೆಂದು ಅಂದುಕೊಂಡನು.

ಮತ್ತೆ ಮೂರು ತಿಂಗಳು ಕಳೆಯುವುದರೊಳಗೆ ಅವನ ವ್ಯಾಪಾರವು ಬಹುದೊಡ್ಡದಾಯಿತು. ಪಾಟಲೀಪುತ್ರದಲ್ಲಿ ಅವನೊಬ್ಬ ಕೋಟೀಶ್ವರನಾದನು. ಅವನ ಹೆಂಡತಿ ಮಾಲಿನಿಗೆ ಇದೆಲ್ಲಾ ವಿಚಿತ್ರವಾಗಿ ತೋರತೊಡಗಿತು. ಗಂಡನ ಮಾತನ್ನು ಈಗ ನಂಬಿದಳು.

ಆಗ ಏನಾಯಿತೆಂದರೆ, ವಿಶಾಖನು ಅಷ್ಟು ಬೇಗದಲ್ಲಿ ಕೋಟೀಶ್ವರನಾದುದರಿಂದ ಕೆಲವು ತೊಂದರೆಗಳೆದ್ದುವು. ವ್ಯಾಪಾರದಲ್ಲಿರುವ ಅವನ ಪ್ರತಿಸ್ಪರ್ಧಿ ವ್ಯಾಪಾರಿಗಳು, ವಿಶಾಖನು ಕಲಬೆರಿಕೆಯ ಸರಕುಗಳನ್ನು ಮಾರುತ್ತಾನೆಂದು, ಕಳ್ಳ ಲೆಕ್ಕಗಳನ್ನು ಬರೆದು ರಾಜನನ್ನು ಮೋಸಪಡಿಸುತ್ತಾನೆಂದು, ತೆರಿಗೆಗಳನ್ನು ತಪ್ಪಿಸಿಕೊಳ್ಳುತ್ತಾನೆಂದು ವದಂತಿಗಳನ್ನು ಎಬ್ಬಿಸಿದರು.

ಆ ವದಂತಿಗಳು ಹೋಗಿ ಹೋಗಿ ರಾಜನ ಕಿವಿಗೂ ಬಿತ್ತು. ರಾಜನು ವಿಶಾಖನ ಮೇಲೆ, ತೆರಿಗೆಗಳನ್ನು ತಪ್ಪಿಸಿ ಅಕ್ರಮವಾಗಿ ಧನಾರ್ಜನೆ ಮಾಡುತ್ತಾನೆಂದು ಅಪರಾಧದ ಪತ್ರವನ್ನು ಜಾರೀಗೊಳಿಸಿದನು. ರಾಜನು ನಿರ್ಣಯಿಸುವ ತೆರಿಗೆಯನ್ನು ಹತ್ತು ದಿನಗಳೊಳಗೆ ಕಟ್ಟದೆ ಹೋದಲ್ಲಿ,



ಕಾರಾಗೃಹಕ್ಕೆ ಕಳುಹಿಸುವುದಾಗಿ ರಾಜನು ಅವನಿಗೆ ಎಚ್ಚರಿಕೆ ಕೊಟ್ಟನು. ದೊಡ್ಡ ಪೇಚೇ ಬಂದಿತು.

ವಿಶಾಖನು ಅಂತಹ ಇಕ್ಕಟ್ಟಿನ ಪರಿಸ್ಥಿತಿಯಲ್ಲಿರುವಾಗಲೇ ಅವನ ಮಾವಯ್ಯನಾದ ಜಯನಂದನು ತೀರಿಹೋದನು. ಹೀಗಾಗಿ ವಿಶಾಖನಿಗೆ ಸರಿಯಾದ ಸಲಹೆ ಮಾಡುವವರು ಯಾರೂ ಇಲ್ಲವಾದರು.

ರಾಜನು ಕೊಟ್ಟ ಗಡುವಿನ ದಿನ ಸಮೀಪಿಸುತ್ತಿದ್ದಿತು. ಏನು ಮಾಡಬೇಕೆಂದು ತೋರದೆ ಕಳವಳಪಡುತ್ತಿದ್ದ ವಿಶಾಖನಿಗೆ ಮಧ್ಯರಾತ್ರಿಯ ಹೊತ್ತಿನಲ್ಲಿ, ಒಂದು ಕನಸು ಬಿತ್ತು. ತಾನು ಆ ದೇಶಕ್ಕೆ ರಾಜನಾಗಿ ಪ್ರತಿಸ್ಪರ್ಧಿಗಳಾದ ವ್ಯಾಪಾರಸ್ಥರನ್ನು ಚೆನ್ನಾಗಿ ಶಿಕ್ಷೆಗೆ ಗುರಿಪಡಿಸಿದ ಹಾಗೆ ವಿಶಾಖನು ಕನಸು ಕಂಡನು.

ಈ ಕನಸಿನ ಸಂಗತಿಯನ್ನೂ ಹೆಂಡತಿಯೊಂದಿಗೆ ಹೇಳಿದನು. ಅದನ್ನು ಕೇಳಿ ಅವಳು ಬಹಳ ಸಂತೋಷಪಡುತ್ತ, "ಇಷ್ಟೊಂದು ಒಳ್ಳೆಯ ಸ್ವಪ್ನ ಈ ಸಮಯದಲ್ಲಿ ಬರುವುದು ಒಳ್ಳೆಯ ಅದೃಷ್ಟ. ನೀವು ಈ ದೇಶಕ್ಕೆ ರಾಜನಾಗಿಬಿಟ್ಟರೆ, ಈಗ ಬಂದ ಕಠಿಣ ಸಮಸ್ಯೆಗಳೆಲ್ಲಾ ಪರಿಷ್ಕಾರವಾಗಿ ಹೋಗುತ್ತವೆ. ಕನಸು ನಿಜವಾಗಬೇಕೆಂದು ಬೇಗ ಮಂತ್ರೋಚ್ಚಾರ ಮಾಡಿರಿ" ಎಂದು ಅವಸರಪಡಿಸಿದಳು.

ಆದರೆ ವಿಶಾಖನು ಏನೋ ಸಂಶಯಗ್ರಸ್ತನಾದವನಂತೆ ಮುಖಮಾಡಿಕೊಂಡು, "ನಾನು ಈಗಲೇ ಅರಣ್ಯಕ್ಕೆ ಹೋಗಿ ಆ ಮುನಿಯ ದರ್ಶನ ಮಾಡಬೇಕಾಗಿದೆ" ಎಂದು ಹೇಳಿ ಆಗಿಂದಾಗಲೇ ಹೊರಟುಹೋದನು.

ವಿಶಾಖನು ಕಾಡಿನಲ್ಲಿರುವ ಆ ಮುನಿಯ ದರ್ಶನಮಾಡಿ, ಈ ನಡುವೆ ನಡೆದ ಸಂಗತಿಯನ್ನೆಲ್ಲಾ ಮುನಿಯೊಂದಿಗೆ ಹೇಳಿ, "ಮಹಾತ್ಮಾ, ದಯಮಾಡಿ ತಾವು ನನಗೆ ಕೊಟ್ಟ ಅಪೂರ್ವವಾದ ವರವನ್ನು ಉಪಸಂಹರಿಸಿ, ಮಂತ್ರವು ನಿರುಪಯೋಗವಾಗುವ ಹಾಗೆ ಮಾಡಿರಿ" ಎಂದು ಬೇಡಿಕೊಂಡನು.

ಮುನಿ ನಿಶ್ಚಲವಾಗಿ ನಕ್ಕು, "ನಿನಗೆ ಇಷ್ಟು ಬೇಗದಲ್ಲಿ ಜ್ಞಾನೋದಯವಾಗುವುದೆಂದು ನಾನು ಅಂದುಕೊಳ್ಳಲಿಲ್ಲ. ನೀನು ಕೇಳುವುದರಿಂದ ನಾನು ಕೊಟ್ಟ ವರವನ್ನು ಉಪಸಂಹರಿಸುತ್ತೇನೆ. ಇನ್ನು ಹೋಗಿ ಬಾರಪ್ಪ!" ಎಂದು ವಿಶಾಖನನ್ನು ಆಶೀರ್ವದಿಸಿದನು.

ವಿಶಾಖನು ಮನೆಗೆ ಹಿಂದಿರುಗಿ ಬಂದು, ತನ್ನ ಆಸ್ತಿ ಸೊತ್ತುಗಳನ್ನೆಲ್ಲಾ ಮಾರಿ, ರಾಜನ ಖಜಾನೆಗೆ ತೆರಿಗೆಯನ್ನು ಕಟ್ಟಿದನು. ಆಮೇಲೆ ಹೆಂಡತಿಯೊಂದಿಗೆ ದೇಶದೊಳಗಿನ ಒಂದು ಚಿಕ್ಕ ಪಟ್ಟಣವನ್ನು ಸೇರಿ, ಅಲ್ಲಿ ವ್ಯಾಪಾರ ಪ್ರಾರಂಭಿಸಿ, ಬರುವ ಸ್ವಲ್ಪ ಆದಾಯದಿಂದ ತೃಪ್ತಿಪಡುತ್ತಾ, ಯಾವ ಸಮಸ್ಯೆಯೂ ಇಲ್ಲದೆ ಸುಗಮವಾಗಿ ಬಾಳಿ ಬದುಕಿದನು.

ಬೇತಾಳವು ಹೀಗೆ ಕಥೆಯನ್ನು ಮುಗಿಸಿ, "ರಾಜಾ, ವಿಶಾಖನು ಮಂತ್ರವನ್ನು ಜಪಿಸಿದರೆ, ದೇಶಕ್ಕೇ ರಾಜನಾಗಿ ಬಿಡುತ್ತಿದ್ದನಲ್ಲವೆ? ಆ ಅವಕಾಶವನ್ನು ಜಾರಲು ಬಿಟ್ಟದ್ದು ಅವನ ಬುದ್ಧಿ ಹೀನತೆ ತಾನೆ? ರಾಜನಾಗಿಬಿಟ್ಟಿದ್ದರೆ ತನ್ನ ಮೇಲೆ ವದಂತಿಗಳನ್ನು ಎಬ್ಬಿಸಿದವರನ್ನು ಚೆನ್ನಾಗಿ ದಂಡಿಸ ಬಹುದಿತ್ತು. ಅಷ್ಟೇ ಅಲ್ಲದೆ ಎಂತಹ ವಿಷಮ ಸಮಸ್ಯೆಗಳಿಗೂ ಸಿಕ್ಕಿಬೀಳದಂತೆ ಹಾಯಾಗಿ ಜೀವಿಸಿರ ಬಹುದಾಗಿತ್ತು. ಇದೆಲ್ಲ ತಿಳಿದಿದ್ದೂ ಅವನೇಕೆ ಹಾಗೆ ಮಾಡಲಿಲ್ಲ? ಇದಕ್ಕೆ ಸರಿಯಾದ ಉತ್ತರ ತಿಳಿದೂ ಹೇಳದೆ ಹೋದರೆ ನಿನ್ನ ತಲೆ ಒಡೆದು ಪುಡಿಯಾಗುತ್ತ ದೆಂದು ತಿಳಿ!" ಎಂದು ಹೇಳಿ ಸುಮ್ಮನಾಯಿತು.

ಅದಕ್ಕೆ ತ್ರಿವಿಕ್ರಮನು ಹೀಗೆಂದನು: "ವಿಶಾಖನು ವಿಪರೀತ ಆಶೆಯುಳ್ಳವನಾಗಿದ್ದರೂ ಬುದ್ಧಿಹೀನ ನಾದವನಲ್ಲ. ತಾನು ಕಂಡ ಕನಸುಗಳು ನಿಜವಾಗ ದಿರುವ ದಿನಗಳಿಗಿಂತ, ಅವು ನಿಜವಾಗುವ ದಿನಗಳಲ್ಲಿಯೇ ಮನುಷ್ಯರು ವಿಪರೀತ ಪರಿಸ್ಥಿತಿ ಗಳನ್ನು ಇದಿರಿಸಬೇಕಾಗಿ ಬರುತ್ತದೆ. ಈ ನಿಜವನ್ನು ತಿಳಿಯಲಿಕ್ಕಾಗಿಯೇ ಮುನಿ ವಿಶಾಖನಿಗೆ ಹಾಗೆ ವರವನ್ನು ಕೊಟ್ಟನೆಂದು ತಿಳಿಯಬೇಕು. ಯಾವ ಯೋಗ್ಯತೆಯೂ ಇಲ್ಲದ ವಿಶಾಖನು ವರದ ಸಹಾಯದಿಂದ ಶ್ರೀಮಂತನ ಮಗಳನ್ನು ವಿವಾಹ ವಾಗಲು ಸಾಧ್ಯವಾಯಿತು. ಅದರಿಂದಾಗಿ ಬಂಧು ಗಳಿಂದಲೂ, ದಾಸದಾಸಿಯರಿಂದಲೂ ಗೇಲಿಗೆ ಒಳಗಾಗಿದ್ದಾನೆ. ಹಾಗೆಯೇ ವ್ಯಾಪಾರದಲ್ಲಿ ಸ್ವಲ್ಪವೂ ಅನುಭವವಿಲ್ಲದಿದ್ದರೂ ವರಪ್ರಭಾವದಿಂದ ಕೋಟೀಶ್ವರನಾಗಿ, ಇತರ ವ್ಯಾಪಾರಿಗಳ ಈರ್ಷ್ಯಾ ಸೂಯೆಗಳಿಗೆ ಗುರಿಯಾದುದಲ್ಲದೆ, ರಾಜದಂಡನೆಗೂ ಹೆದರಬೇಕಾಗಿ ಬಂತು. ಈ ಅನುಭವಗಳ ಅನಂತರ ಅವನಿಗೆ ಅರ್ಥವಾದುದೇನೆಂದರೆ, ಮುನಿ ಕೊಟ್ಟ ವರವು ಕನಸುಗಳು ಫಲಿಸುವುದಕ್ಕೇ ಹೊರತು, ಆಮೇಲೆ ಬರುವ ಪರಿಣಾಮಗಳನ್ನು ಇದಿರಿಸಲು ಉಪಯೋಗವಿಲ್ಲವೆಂದು. ಇದನ್ನು ತಿಳಿದುದರಿಂದಲೇ ರಾಜ್ಯಾನುಭವವೇನಿಲ್ಲದ ತಾನು ರಾಜನಾಗಿಬಿಟ್ಟರೆ, ತನ್ನ ಮೇಲೆ ಕತ್ತಿ ಹಿರಿಯುವಂತಹ ವ್ಯಾಪಾರಿ ಗಳನ್ನು ಕಠಿಣವಾಗಿ ಶಿಕ್ಷಿಸಿಬಿಡಬಹುದಾದರೂ, ಆಮೇಲೆ ಪ್ರಜೆಗಳ ಸಮಸ್ಯೆಗಳನ್ನು ಪರಿಷ್ಕರಿಸು ವುದರಲ್ಲಿ, ಪ್ರಜಾರಕ್ಷಣೆಗಳಲ್ಲಿ ವಿಫಲನಾಗಲೇ ಬೇಕೆಂದು ಅವನು ಅರಿತಿದ್ದನು. ಆದುದರಿಂದಲೇ ವಿಶಾಖನು ಮುನಿಕೊಟ್ಟ ವರವನ್ನು ಉಪಸಂಹರಿಸಲು ಕೇಳಿಕೊಂಡನು."

ಹೀಗೆ ರಾಜನಿಗೆ ಮೌನಭಂಗವಾದ ಕೂಡಲೇ ಬೇತಾಳವು ಶವದೊಂದಿಗೆ ಮಾಯವಾಗಿ ಹೋಗಿ ಮರದ ಕೊಂಬೆಯಲ್ಲಿ ನೇತಾಡತೊಡಗಿತು.






ನಮ್ಮ ದೇವಾಲಯಗಳು :

## ಕಾಶೀ

ಪ್ರಪಂಚದೊಳಗಿನ ಅತಿ ಪ್ರಾಚೀನ ನಗರಗಳಲ್ಲಿ ಮುಖ್ಯವಾದುದು ಕಾಶೀ. ಕಾಶೀ ಅಂದರೆ ಪ್ರಕಾಶಮಾನವಾದ ಸ್ಥಳವೆಂದೂ, ಕಾಶ ಪುಷ್ಪಗಳು ಹೆಚ್ಚಾಗಿರುವ ಪ್ರದೇಶವೆಂದೂ ಅರ್ಥ. ವರುಣಾ ಮತ್ತು ಅಸಿ ಎಂಬ ಗಂಗೆಯ ಎರಡು ಉಪನದಿಗಳ ನಡುವೆ ಇರುವುದರಿಂದ ಕಾಶಿಯನ್ನು ವಾರಣಾಸಿ ಎಂತಲೂ ಹೇಳುತ್ತಾರೆ.

ಅತಿ ಪ್ರಾಚೀನ ಕಾಲದಿಂದ ಇಲ್ಲಿ ಶಿವಾಲಯ ಇದ್ದುದರಿಂದ ಈ ನಗರವು ಪವಿತ್ರವಾದುದೆಂದು ಹೆಸರು ಪಡೆದಿದೆ. ಇಲ್ಲಿ ಪ್ರಪ್ರಥಮವಾಗಿ ಶಿವಾಲಯವನ್ನು ನಿರ್ಮಿಸಿದವರು ಯಾರು ಎಂಬುದು ಚರಿತ್ರೆಗೆ ನಿಲುಕದ ವಿಷಯವಾಗಿದೆ.





ಎಷ್ಟೋ ಕಾಲದ ಕೆಳಗೆ ದಿವೋದಾಸನೆಂಬ ರಾಜನು ಕಾಶಿಯನ್ನು ಪರಿಪಾಲಿಸಿದ್ದಾನೆ. ಅವನು ಪ್ರಜೆಗಳ ಕ್ಷೇಮವನ್ನೇ ಪರಮಾರ್ಥ ಧರ್ಮವಾಗಿರಿಸಿಕೊಂಡು ಪರಿಪಾಲನೆ ಮಾಡುವನು. ಆದರೂ ಶಿವನ ಮೇಲೆ ತೋರಿಸ ಬೇಕಾದಷ್ಟು ಭಕ್ತಿಶ್ರದ್ಧೆ ತೋರಿಸಲು ಮರೆತನು. ಆಸ್ಥಾನದಲ್ಲಿರುವ ಹಿರಿಯರಾರೂ ಆ ತಪ್ಪನ್ನು ಎತ್ತಿ ರಾಜನಿಗೆ ತೋರಿಸಲಿಲ್ಲ.




ಈ ಬಗೆಯ ರಾಜನ ಉದಾಸೀನ ಭಾವವು ಶಿವನಿಗೆ ರಾಜನ ಮೇಲೆ ಇಷ್ಟವಿಲ್ಲದಂತೆ ಮಾಡಿತು. ಆದರೂ ಶಿವನು ರಾಜನಿಗೇನೂ ಹಾನಿ ಮಾಡದೆ ನಗರವನ್ನು ಬಿಟ್ಟು ಹೊರಟು ಹೋದನು. ಈ ಸಂಗತಿ ಶಿವಭಕ್ತರ ಹೊರತು ಯಾರಿಗೂ ತಿಳಿಯದು. ರಾಜನು ಎಂದಿನಂತೆ ಪ್ರಜೆಗಳಿಗೆ ಉಪಯೋಗವಾಗುವ ಕಾರ್ಯಗಳಲ್ಲಿ ಮಗ್ನನಾಗಿದ್ದನು.

ಕೆಲವು ವರ್ಷ ಕಳೆದ ಮೇಲೆ ಶಿವನಿಗೆ ತಾನಿಲ್ಲದ ಕಾಶೀ ನಗರವು ಹೇಗಿರುವುದೋ ನೋಡಬೇಕೆಂಬ ಕುತೂಹಲವಾಯಿತು. ನಗರವು ಹೇಗಿರುವುದೆಂದು ನೋಡಿ ಬರಲು ತನ್ನ ಕೆಲವು ಗಣಗಳನ್ನು ಕಳುಹಿಸಿದನು. ರುದ್ರ ಗಣಗಳು ನಗರವನ್ನು ಸೇರಿ, ಅಲ್ಲಿಯ ಅಂದ ಚೆಂದಗಳಿಗೆ ಮಾರುಹೋಗಿ ಗಂಗಾ ತೀರದಲ್ಲಿಯೇ ಉಳಿದುಬಿಟ್ಟರು.





ಒಂದು ದಿನ ವಿಷ್ಣು ಬ್ರಾಹ್ಮಣನ ರೂಪದಲ್ಲಿ ದಿವೋದಾಸನ ಬಳಿಗೆ ಬಂದು, "ಮನುಷ್ಯನು ಕೇವಲ ಒಳ್ಳೆಯವನೇ ಆಗಿದ್ದರೆ ಸಾಲದು. ಅವನಿಗೆ ಆಧ್ಯಾತ್ಮ ಚಿಂತನೆಯೂ, ಭಕ್ತಿಯೂ ಇರಬೇಕು. ಅದಕ್ಕಾಗಿ ನೀನು ಶಿವನನ್ನು ಆರಾಧಿಸಬೇಕು" ಎಂದು ತಿಳಿ ಹೇಳಿದನು.

ರಾಜನು ತನ್ನ ಆಧ್ಯಾತ್ಮಿಕ ಕರ್ತವ್ಯವನ್ನು ನೆರವೇರಿಸಲು ಸಿದ್ಧನಾಗಿ ಶಿವನಿಗೆ ಬ್ರಹ್ಮಾಂಡವಾದೊಂದು ಆಲಯವನ್ನು ನಿರ್ಮಿಸಿ, ಅದರಲ್ಲಿ ಶಿವಲಿಂಗವನ್ನು ಪ್ರತಿಷ್ಠೆ ಮಾಡಿದನು. ಈ ಪರಿಣಾಮಕ್ಕೆ ಆನಂದಿತನಾದ ಶಿವನು ಮತ್ತೆ ಕಾಶೀ ನಗರಕ್ಕೆ ಬಂದನು.







ಕಾಲ ಪ್ರವಾಹದಲ್ಲಿ ಹಳೆಯ ಶಿವಾಲಯವು ಕಣ್ಮರೆಯಾಗಿ ಹೋಯಿತು. ಪ್ರಸ್ತುತ ಅಲ್ಲಿರುವ ಶಿವಾಲಯವು ಇಂದೋರನ್ನು ಪರಿಪಾಲಿಸಿದ ರಾಣಿ ಅಹಲ್ಯಾಬಾಯಿ ನಿರ್ಮಿಸಿದ್ದಾಗಿದೆ. ಆಲಯದ ಗೋಪುರದ ಮೇಲೆ ಬಂಗಾರದ ಕವಚವನ್ನು ಪಂಜಾಬನ್ನು ಪರಿಪಾಲಿಸಿದ ರಾಜಾ ರಂಜಿತ್‌ಸಿಂಗ್ ತೊಡಿಸಿದನು.

ವಿಶ್ವನಾಥ, ವಿಶ್ವೇಶ್ವರ ಎಂದು ಕರೆಯಲ್ಪಡುವ ಈ ಆಲಯದ ದೇವನನ್ನು ದರ್ಶಿಸಲು ದಿನಾ ದೇಶದ ನಾಲ್ಕು ಮೂಲೆಗಳಿಂದಲೂ ಭಕ್ತರು ಬರುತ್ತಾ ಇರುವರು. ಮುಖ್ಯವಾದ ಪುಣ್ಯ ದಿನಗಳಲ್ಲಿ ಈ ಆಲಯದಲ್ಲಿ ಶಿವನಿಗೆ ಪ್ರತ್ಯೇಕ ಪೂಜೆಗಳೂ, ಉತ್ಸವಗಳೂ ನಡೆಯುತ್ತಾ ಇರುತ್ತವೆ.





ವಾರಣಾಸಿಯ ಸಮೀಪದ ಗಂಗಾ ನದಿಯಲ್ಲಿ ಸ್ನಾನ ಮಾಡುವುದನ್ನು ಭಕ್ತರು ಅತ್ಯಂತ ಪವಿತ್ರವೆಂದು ಭಾವಿಸುವರು. ಕೆಲವು ಭಕ್ತರು ಕಾಶಿಯಲ್ಲಿ ಪ್ರಾಣ ಬಿಡುವುದನ್ನು ಪುಣ್ಯವೆಂದು ಭಾವಿಸುವರು. ಸತ್ತುಹೋದವರನ್ನು ಕಾಶಿಯಲ್ಲಿ ದಹನಮಾಡುವುದು ಪುಣ್ಯವೆಂಬ ವಿಶ್ವಾಸ ಹಲವರಲ್ಲಿದೆ. ಸತ್ತವರ ಅಸ್ಥಿಗಳನ್ನು ಕೂಡಾ ಗಂಗೆಯಲ್ಲಿ ಬೆರೆಸುತ್ತಾರೆ.

ಕಾಶೀ ನಗರವು ನಮ್ಮ ಪುರಾಣ ಕಥೆಗಳಲ್ಲಿ ಎಷ್ಟೋ ಕಡೆ ಸಂಬಂಧಿಸಿಕೊಂಡಿರುತ್ತದೆ. ಹರಿಶ್ಚಂದ್ರನು ಸ್ಮಶಾನದ ಕಾವಲಿಗನಾಗಿದ್ದಾಗ, ಅವನ ಹೆಂಡತಿ ಸತ್ತ ಕುಮಾರನನ್ನು ಇಲ್ಲಿಯ ಸ್ಮಶಾನಕ್ಕೇ ತಂದಳೆಂದು ಹೇಳುತ್ತಾರೆ.






ಯುಗೆ ಯುಗಗಳಿಂದ ಅಸಂಖ್ಯ ಭಕ್ತರು ಕಾಶಿಯನ್ನು ಸಂದರ್ಶಿಸಿದ್ದಾರೆ. ಗೌತಮಬುದ್ಧ, ಆದಿಶಂಕರ, ಮಧ್ವ, ರಾಮಾನುಜ, ಕಬೀರ, ನಾನಕ್, ತುಲಸೀದಾಸ, ಚೈತನ್ಯಪ್ರಭು ಮೊದಲಾದ ಎಷ್ಟೋ ಮಂದಿ ಮಹನೀಯರು ಕಾಶಿಯನ್ನು ಸಂದರ್ಶಿಸಿದ್ದಾರೆ. ಸಾವಿರಾರು ಸಂವತ್ಸರಗಳ ಚರಿತ್ರೆಯ ಕಾಶೀ ನಗರವು ಇಂದಿಗೆ ಕೂಡಾ ನಿತ್ಯ ನೂತನವಾಗಿ ಬೆಳಗಿಕೊಂಡಿವೆ.



# ವಲ್ಕಲಚೀರಿ ಕಥೆ

ಒಂದಾನೊಂದು ಕಾಲದಲ್ಲಿ ಪೋತನವೆಂಬ ನಗರವನ್ನು ಸೋಮಚಂದ್ರನೆಂಬ ರಾಜನು ಪಾಲಿಸಿಕೊಂಡಿದ್ದನು. ಅವನ ಪತ್ನಿಯ ಹೆಸರು ಧಾರಿಣಿ ದೇವಿ. ಅವರಿಗೆ ಪ್ರಸನ್ನಚಂದ್ರನೆಂಬ ಕುಮಾರನಿದ್ದನು.

ಒಂದು ದಿನ ಧಾರಿಣಿ ತನ್ನ ಪತಿಯ ತಲೆಯನ್ನು ಬಾಚಿಕೊಂಡಿರುವಾಗ, ನರೆತ ಒಂದು ಕೂದಲನ್ನು ನೋಡಿ, ಪ್ರಾಯ ತುಂಬಿದುದನ್ನು ಕುರಿತು ಸ್ವಲ್ಪ ಹಾಸ್ಯವಾಗಿ ಮಾತಾಡಿದಳು.

"ಓಹೋ! ನಾವಿನ್ನು ರಾಜ್ಯವಾಳಿಕೊಂಡು ಕುಳಿತುಕೊಳ್ಳುವಂತಿಲ್ಲ. ಈಗಾಗಲೇ ಕಾಲ ಮೀರಿ ಹೋಗಿದೆ. ನಾನು ಅರಣ್ಯಕ್ಕೆ ಹೋಗಿ ಋಷಿಗಳ ಹಾಗೆ ಜೀವಿಸಿಕೊಂಡು ತಪಸ್ಸು ಮಾಡಿಕೊಂಡಿರುತ್ತೇನೆ. ಈಗಲೇ ಹೊರಡುತ್ತೇನೆ" ಎಂದನು ಸೋಮಚಂದ್ರ ರಾಜ.

ಗಂಡನನ್ನು ಬಿಟ್ಟು ಬದುಕಿರಲಾರದ ಧಾರಿಣಿ, "ನೀವು ಅರಣ್ಯಕ್ಕೆ ಹೋದರೆ, ನಾನು ಕೂಡಾ ನಿಮ್ಮೊಂದಿಗೇ ಬರುತ್ತೇನೆ" ಎಂದಳು.

ಸೋಮಚಂದ್ರನು ತನ್ನ ಕುಮಾರನಾದ ಪ್ರಸನ್ನಚಂದ್ರನಿಗೆ ರಾಜ್ಯಾಭಿಷೇಕ ಮಾಡಿ, ತನ್ನ ಹೆಂಡತಿಯೊಂದಿಗೆ ಅರಣ್ಯಕ್ಕೆ ಹೋದನು. ಅಲ್ಲೊಂದು ಪ್ರಶಸ್ತವಾದ ಸ್ಥಳದಲ್ಲಿ ಅವನು ತಪಸ್ಸು ಮಾಡಿಕೊಂಡಿರಲು, ಸ್ವಲ್ಪಕಾಲದ ಮೇಲೆ ಧಾರಿಣಿ ಗರ್ಭವತಿಯಾಗಿ, ಕಾಲಕ್ರಮದಲ್ಲಿ ಗಂಡು ಶಿಶುವನ್ನು ಹೆತ್ತಳು. ಆ ಮಗುವಿಗೆ ವಲ್ಕಲಚೀರಿ ಎಂದು ಹೆಸರಿಟ್ಟರು.

ಆಮೇಲೆ ಧಾರಿಣಿ ಹೆಚ್ಚು ಕಾಲ ಬದುಕಿರಲಿಲ್ಲ. ಅವಳು ತೀರಿಹೋದ ಮೇಲೆ ಸೋಮಚಂದ್ರನು ಮಗ ವಲ್ಕಲಚೀರಿಗೆ ತಾನೇ ಹಾಲು ಕರೆದು ಕುಡಿಸಿ ಬೆಳೆಸಿದನು. ಬುದ್ಧಿ ತಿಳಿದಂದಿನಿಂದಲೂ ವಲ್ಕಲಚೀರಿ ಮುನಿಗಳ ಹೊರತು ಬೇರೆ ಯಾರನ್ನೂ ನೋಡಲಿಲ್ಲ. ಹಾಗೆಯೇ ದೊಡ್ಡವನಾಗುತ್ತಿದ್ದನು.

ಋಷಿ ಜೀವಿತದಲ್ಲಿರುವ ತನ್ನ ತಂದೆಯೊಂದಿಗೆ ತನ್ನ ತಮ್ಮನೊಬ್ಬನು ಬೆಳೆಯುತ್ತಿರುವ ಸಂಗತಿ ಪ್ರಸನ್ನಚಂದ್ರನಿಗೆ ತಿಳಿಯಿತು. ಅವನು ತಮ್ಮನನ್ನು ಹೇಗಾದರೂ ತನ್ನ ಬಳಿಗೆ ಕರೆಯಿಸಿಕೊಳ್ಳಬೇಕೆಂದು ನಿಶ್ಚಯಿಸಿಕೊಂಡನು.

ಆದಕ್ಕಾಗಿ ಪ್ರಸನ್ನಚಂದ್ರನು ಸುಂದರಿಯರಾದ ಕೆಲವು ಮಂದಿ ನಾಟ್ಯಗಾತಿಯರನ್ನು ಕರೆಯಿಸಿ,



ಅವನಿಗೆ ಆಶ್ರಮವಾಸಿಗಳ ಬಟ್ಟೆಗಳನ್ನು ತೊಡಿಸಿದನು. ಹಣ್ಣುಗಳನ್ನೂ, ಮಿಠಾಯಿಗಳನ್ನೂ ಅವರ ಕೈಗೆ ಕೊಟ್ಟು, ಹೇಗಾದರೂ ವಲ್ಕಲಚೀರಿಯನ್ನು ಆಕರ್ಷಣೆಮಾಡಿ ಅವನನ್ನು ಕರೆದುಕೊಂಡು ಬರಬೇಕೆಂದು ಆಜ್ಞೆಮಾಡಿ ಆ ನಾಟ್ಯಗಾತಿಯರನ್ನು ಅರಣ್ಯಕ್ಕೆ ಕಳುಹಿಸಿದನು.

ವಲ್ಕಲಚೀರಿ ಆಶ್ರಮದಲ್ಲಿ ಒಬ್ಬಂಟಿಗನಾಗಿರುವ ಹೊತ್ತು ನೋಡಿ, ನಾಟ್ಯಗಾತಿಯರು ವಲ್ಕಲಚೀರಿಯ ಹತ್ತಿರ ಹೋದರು. ಅವನಿಗೆ ತಾವು ತಂದ ಹಣ್ಣುಗಳನ್ನೂ, ಮಿಠಾಯಿಗಳನ್ನೂ ಕೊಟ್ಟರು. ಅಂತಹದನ್ನು ಅವನು ಅದುವರೆಗೂ ನೋಡಿರಲಿಲ್ಲ. ಅವುಗಳನ್ನು ತಂದವರೆಲ್ಲ ಋಷಿಗಳೆಂದೇ ಅವನ ಭಾವನೆ.

ಆ ನಾಟ್ಯಗಾತಿಯರು ಅವನೊಂದಿಗೆ, "ನಮ್ಮ ಆಶ್ರಮವು ಸ್ವಲ್ಪದೂರ ಪೋತನ ಎಂಬ ಸ್ಥಳದಲ್ಲಿದೆ. ನಮ್ಮ ಆಶ್ರಮವು ತುಂಬಾ ಚೆನ್ನಾಗಿರುತ್ತದೆ. ಎಷ್ಟೋ ಸುಖಗಳು ಅಲ್ಲಿವೆ. ನಮ್ಮೊಂದಿಗೆ ಬಂದರೆ ದಿನಾ ಇಂತಹುದೆಲ್ಲ ತಿನ್ನಬಹುದು" ಎಂದು ಹೇಳಿದರು.

ವಲ್ಕಲಚೀರಿಗೆ ಪೋತನಾಶ್ರಮವನ್ನು ನೋಡಿ ತೀರಬೇಕೆಂದು ಬಲವಾದ ಕೋರಿಕೆಯುಂಟಾಯಿತು. ಆದರೆ ಅಷ್ಟರಲ್ಲಿ ಸೋಮಸುಂದರನು ಅಲ್ಲಿಗೆ ಬರುವ ಸೂಚನೆಯನ್ನು ಕಂಡು, ಆ ನಾಟ್ಯಗಾತಿಯರು ಅರಣ್ಯದೊಳಗೆ ಓಡಿಹೋದರು. ಸ್ವಲ್ಪ ಹೊತ್ತಿನ ಮೇಲೆ ವಲ್ಕಲಚೀರಿ ಅವರನ್ನು ಹುಡುಕಲು ಅರಣ್ಯದೊಳಗೆ ಅವರು ಓಡಿದ ದಿಕ್ಕಿನಲ್ಲಿ ಸ್ವಲ್ಪದೂರ ಹೋದನು. ಅಲ್ಲಿ ಒಂದು ಬಂಡಿ ಇದಿರಾಗಿ ಬರುವುದು ಕಾಣಿಸಿತು. ಅವನು ಬಂಡಿಯವನನ್ನು ನೋಡಿ, "ಮುನೀಂದ್ರಾ, ಪೋತನಾಶ್ರಮಕ್ಕೆ ಹೇಗೆ ಹೋಗಬೇಕು? ದಾರಿ ಹೇಗೆ?" ಎಂದು ಕೇಳಿದನು.

ಬಂಡಿಯೊಳಗೇ ಇದ್ದ ಬಂಡಿಯವನ ಹೆಂಡತಿ ಕಿರುನಗೆ ನಕ್ಕಳು.

"ಪೋತನಾಶ್ರಮಕ್ಕೆ ಹೋಗಬೇಕಾದರೆ ಈ ಬಂಡಿಯಲ್ಲಿ ಏರಿಕೋ. ನಾನು ಅಲ್ಲಿಗೇ ಹೋಗುತ್ತೇನೆ" ಎಂದನು ಬಂಡಿಯವನು.

ವಲ್ಕಲಚೀರಿ ಬಂಡಿಯೊಳಗೆ ಹತ್ತಿ ಕುಳಿತು, ದಾರಿಯುದ್ದಕ್ಕೂ, "ಆ ಋಷಿ ಯಾರು? ಈ ಕುಟೀರದಲ್ಲಿ ಯಾವ ಮುನಿ ಇದ್ದಾರೆ? ಅಲ್ಲಿ ಕಾಣುವ ಆಶ್ರಮದ ಹೆಸರೇನು?" ಎಂದು ಬಂಡಿಯವನನ್ನು ಮುಗ್ಧಭಾವದಿಂದ ಕೇಳುತ್ತಾ, ತನ್ನ ಅಜ್ಞಾನದಿಂದ ಬಂಡಿಯವನನ್ನೂ, ಅವನ ಹೆಂಡತಿಯನ್ನೂ ಹೊಟ್ಟೆ ತುಂಬ ನಗಿಸಿದನು.

ದಾರಿಯಲ್ಲಿ ಒಬ್ಬ ಕಳ್ಳನು ಬಂಡಿಯನ್ನು ಅಟಕಾಯಿಸಿದನು. ಬಂಡಿಯವನು ದೊಣ್ಣೆ ಎತ್ತಿ ಕಳ್ಳನ ತಲೆಗೊಂದು ಹೊಡೆಯಲು ಕಳ್ಳನು ಮುದುಡಿ ಬಿದ್ದನು. ಬಂಡಿಯವನು ಕಳ್ಳನ ಹತ್ತಿರ



ಸಿಕ್ಕಿದ ಸೊತ್ತನ್ನೆಲ್ಲಾ ಬಂಡಿಯಲ್ಲಿ ಹಾಕಿಕೊಂಡು ನೆಟ್ಟಗೆ ಪೋತನ ನಗರಕ್ಕೆ ಸಾಗಿದನು.

"ಪೋತನ ನಗರವು ತಲಪಿದ ಕೂಡಲೇ ಬಂಡಿಯವನು ವಲ್ಕಲಚೀರಿಯೊಂದಿಗೆ, "ಅಪ್ಪಾ, ಹುಡುಗಾ, ಇದೇ ಪೋತನಾಶ್ರಮ. ಈ ಆಶ್ರಮದಲ್ಲಿ ಏನು ಬೇಕಾದರೂ ಪಡೆಯಲು ಇದು ಇರಬೇಕಾಗುತ್ತದೆ. ಅದಕ್ಕಾಗಿ ಇವುಗಳನ್ನು ನಿನ್ನ ಹತ್ತಿರ ಇಟ್ಟುಕೋ" ಎಂದು ಹೇಳಿ ಸ್ವಲ್ಪ ಹಣವನ್ನು ವಲ್ಕಲಚೀರಿಯ ಕೈಗೆ ಕೊಟ್ಟು ಬಂಡಿಯವನು ತನ್ನ ದಾರಿ ಹಿಡಿದು ಹೊರಟು ಹೋದನು.

ಆ ನಗರವನ್ನು ನೋಡಿ ವಲ್ಕಲಚೀರಿಗೆ ಅತ್ಯಾಶ್ಚರ್ಯವಾಯಿತು. ಅಂತಹ ಆಶ್ರಮ ಸ್ಥಳವಿರುವುದೆಂದು ಅವನು ಸ್ವಪ್ನದಲ್ಲಿಯೂ ನೆನೆಸಿರಲಿಲ್ಲ. ದಾರಿಯಲ್ಲಿ ಕಂಡವರಿಗೆಲ್ಲಾ, "ನಮಸ್ಕಾರ ಮಹಾಮುನಿಗಳೇ!" ಎಂದು ಹೇಳಿ ನಮಸ್ಕರಿಸುತ್ತಾ, ಬೀದಿಗಳಲ್ಲಿ ಸುತ್ತಿ ಸುತ್ತಿ ಒಂದು ಪ್ರಾಂಗಣದೊಳಗೆ ಪ್ರವೇಶಿಸಿದನು. ಅದರ ಮಧ್ಯದಲ್ಲಿ ರಾಜನರ್ತಕಿಯ ಮನೆ ಇದ್ದಿತು.

ವಲ್ಕಲಚೀರಿ ರಾಜನರ್ತಕಿಯನ್ನು ನೋಡಿ, "ಅಪ್ಪಾ ಸ್ವಾಮಿಗಳೇ, ನನಗೊಂದು ಕುಟೀರವನ್ನು ಕೊಡಿಸಿರಿ ಸ್ವಾಮಿ" ಎಂದು ಬಂಡಿಯವನು ಕೊಟ್ಟ ಹಣವನ್ನೆಲ್ಲಾ ಅವಳ ಕೈಗೆ ಹಾಕಿದನು.

ಅವಳು "ಹಾಗೆಯೇ ಆಗಲಪ್ಪಾ" ಎಂದು ಹೇಳಿ, ವಲ್ಕಲಚೀರಿಯನ್ನು ಕರೆದೊಯ್ದು, ಚೆಂದಾಗಿ ಎಣ್ಣೆಯೊತ್ತಿ ಸ್ನಾನಮಾಡಿಸಿ, ಹೊಸ ಬಟ್ಟೆಗಳನ್ನು ಉಡಿಸಿ ಅವನಿಗೆ ತನ್ನ ಮಗಳೊಂದಿಗೆ ಮದುವೆ ಕೂಡಾ ಕ್ರಮವಾಗಿ ಮಾಡಿಸುವ ಕಾರ್ಯಕ್ಕೆ ತೊಡಗಿದಳು. ವಲ್ಕಲಚೀರಿ ಯಾವುದಕ್ಕೂ ಅಭ್ಯಂತರ ಹೇಳದೆ ಎಲ್ಲವನ್ನೂ ಮಾಡಿಸಿ ಕೊಳ್ಳುತ್ತಿದ್ದ.

ಆದರೆ ಅವನಿಗೆ ಮದುವೆಯ ಹಾಡುಗಳನ್ನು ಕೇಳಿ ಆನಂದವೂ, ಮೇಳವಾದ್ಯಗಳನ್ನು ಕೇಳಿ ಆಶ್ಚರ್ಯವೂ, ಅವುಗಳಿಂದ ಸ್ವಲ್ಪ ಭಯವೂ ಉಂಟಾಯಿತು.

ಅಪ್ಸರೊಳಗೆ ನಾಟ್ಯಗಾತಿಯರು ಪ್ರಸನ್ನಚಂದ್ರನ ಬಳಿಗೆ ಹೋಗಿ ಅರಣ್ಯದಲ್ಲಿ ನಡೆದುದನ್ನೆಲ್ಲಾ ಹೇಳಿದರು. ಅವರೊಂದಿಗೆ ತನ್ನ ತಮ್ಮನು ಬಾರದಿರುವುದನ್ನು ನೋಡಿ ಪ್ರಸನ್ನಚಂದ್ರನು ಕೋಪದಿಂದ ಕೂಗಾಡಿದನು. ಅವನು ಹಾಗೆ ರೇಗಿಕೊಂಡಿರುವಾಗಲೇ, ರಾಜನರ್ತಕಿಯ ಮನೆಯಿಂದ ಹೊರಡುವ ಮಂಗಳವಾದ್ಯ ಧ್ವನಿಗಳನ್ನು ಕೇಳಿ ಇನ್ನಿಷ್ಟು ಕೋಪವೇರಿತು.

ಅದೇನು ಗಲಾಟೆ ಎಂದು ವಿಚಾರಿಸಿದಾಗ ಸತ್ಯಸಂಗತಿ ಮೆಲ್ಲನೆ ಹೊರಬಿದ್ದಿತು. ರಾಜನರ್ತಕಿಗೆ ಅಳಿಯನಾಗಲಿರುವವನು ಮಹಾರಾಜನ ತಮ್ಮನಾದ ವಲ್ಕಲಚೀರಿಯೇ!

ಪ್ರಸನ್ನಚಂದ್ರನು ತನ್ನ ತಮ್ಮನನ್ನು ಕರೆದುಕೊಂಡು ಬಂದು ತನ್ನ ಮನೆಯಲ್ಲಿ ಇರಿಸಿಕೊಂಡನು. ಅವನು ವಲ್ಕಲಚೀರಿಗೆ ರಾಜ್ಯಭಾರವನ್ನು ಕೊಟ್ಟು, ಉತ್ತಮಳಾದ ರಾಜಕುಮಾರಿಯರನ್ನು ಆರಿಸಿ ಆತನಿಗೆ ಮದುವೆ ಕೂಡಾ ಮಾಡಿದನು.

ವಲ್ಕಲಚೀರಿ ತನ್ನ ಅಣ್ಣನೊಂದಿಗೆ ಸೇರಿಕೊಂಡ ಕೆಲವೇ ದಿನಗಳಲ್ಲಿ ರಾಜಭಟರು, ಆ ಬಂಡಿಯವನನ್ನು ಕಳ್ಳನೆಂದು ಹಿಡಿದರು. ನಡೆದುದೇನೆಂದರೆ, ಬಂಡಿಯವನು ಕಳ್ಳನಿಂದ ಪಡೆದುಕೊಂಡ ವಸ್ತುಗಳು ಕೆಲವನ್ನು ಮಾರಿದನು. ಅವುಗಳನ್ನು ಕಳೆದುಕೊಂಡವರು ಆ ವಸ್ತುಗಳನ್ನು ನೋಡಿದರು. ಬಂಡಿಯವನು ಅವುಗಳನ್ನು ಮಾರಿದನೆಂದು ತಿಳಿಯಿತು. ಅವರು ಫಿರ್ಯಾದಿ ಮಾಡಿದ ಮೇಲೆ ರಾಜಭಟರು ಬಂಡಿಯವನನ್ನು ಹಿಡಿದು ತಂದು ರಾಜನ ಮುಂದೆ ನಿಲ್ಲಿಸಿದರು. ಆಗ ತನ್ನ ಅಣ್ಣನ ಪಕ್ಕದಲ್ಲೇ ಕುಳಿತಿದ್ದ ವಲ್ಕಲಚೀರಿ ಆ ಬಂಡಿಯವನ ಗುರುತು ಹಿಡಿದು, ನಿಜವಾಗಿ ನಡೆದುದೇನೆಂಬುದನ್ನು ಹೇಳಿ ಬಂಡಿಯವನನ್ನು ಬಿಡುಗಡೆ ಮಾಡಿಸಿದನು.

ವಲ್ಕಲಚೀರಿ ಹನ್ನೆರಡು ವರ್ಷಗಳವರೆಗೆ ಸುಖವಾಗಿ ಜೀವಿತವನ್ನು ಕಳೆದ ಮೇಲೆ ಅವನಿಗೆ ತನ್ನ ತಂದೆಯ ಸಂಗತಿ ನೆನಪಿಗೆ ಬಂತು. ಇಷ್ಟರೊಳಗೆ ಮುದುಕನಾದ ಸೋಮಚಂದ್ರನು ತನ್ನ ಮಗನನ್ನು ನೆನೆದು ಅತ್ತು ದುಃಖಿಸಿ ಎರಡು ಕಣ್ಣುಗಳನ್ನೂ ಕಳೆದುಕೊಂಡಿದ್ದನು. ಉಳಿದ ಮುನಿಗಳು ಅವನನ್ನು ನೋಡಿಕೊಳ್ಳುತ್ತಿದ್ದರು. ಆ ಮುನಿಗಳು ಸುಮ್ಮನಿರದೆ ವಲ್ಕಲಚೀರಿಯನ್ನು ಕುರಿತು ಅನ್ವೇಷಣೆ ನಡೆಸಿ, "ನೀವೇನೂ ಚಿಂತಿಸಬೇಕಾಗಿಲ್ಲ. ವಲ್ಕಲಚೀರಿ ಅವನ ಅಣ್ಣನ ಹತ್ತಿರ ಸೇರಿ ಅಲ್ಲಿ ಸುಖವಾಗಿದ್ದಾನೆ" ಎಂದು ಸೋಮಚಂದ್ರನೊಂದಿಗೆ ಹೇಳಿದರು.

ತನ್ನ ತಂದೆಯ ಜ್ಞಾಪಕ ಬಂದ ಕೂಡಲೇ ವಲ್ಕಲಚೀರಿ ಪಶ್ಚಾತ್ತಾಪದಿಂದ ಉರಿದು ಬೇಯುತ್ತ ತಂದೆಯನ್ನು ನೋಡುವೆನೆಂದು ಹೊರಟನು. ಅವನೊಂದಿಗೆ ಪ್ರಸನ್ನಚಂದ್ರನೂ ಹೊರಟನು. ಅರಣ್ಯವನ್ನು ಪ್ರವೇಶಿಸಿ ಆಶ್ರಮಕ್ಕೆ ಹೋಗುವ ದಾರಿಯಲ್ಲಿ, ವಲ್ಕಲಚೀರಿ ಅಣ್ಣನಿಗೆ ತನ್ನ ಪರಿಚಯದ ಜಾಗೆಗಳನ್ನು ತೋರಿಸುತ್ತಾ ನಡೆದನು. ಅಷ್ಟರೊಳಗೆ ಸೋಮಚಂದ್ರನು ತನ್ನ ಮಗನು ಬರುತ್ತಿರುವನೆಂಬ ವಾರ್ತೆಯನ್ನು ಕೇಳಿದ ಕೂಡಲೇ, ಅವನ ಕಣ್ಣುಗಳಿಂದ ಧಾರಾಕಾರವಾಗಿ ನೀರಿಳಿಯತೊಡಗಿತು. ಅದರಿಂದ ಅವನಿಗೆ ಹೋದ ದೃಷ್ಟಿ ತಿರುಗಿ ಬಂದುಬಿಟ್ಟಿತು. ಆ ವಿಚಿತ್ರವನ್ನು ನೋಡಿ ಅಲ್ಲಿದ್ದ ಮುನಿಗಳಿಗೆಲ್ಲಾ ಆಶ್ಚರ್ಯವಾಯಿತು.





# ಶಿವಪುರಾಣ

ರೌದ್ರಗಣಗಳಿಗೂ, ದಾನವ ಸೇನೆಗಳಿಗೂ ಎಷ್ಟು ಕಾಲದವರೆಗೆ ಯುದ್ಧ ನಡೆದರೂ ಶಂಖಚೂಡನ ಸೇನೆಗಳು ಏನೂ ಕಡಿಮೆಯಾಗದಿರುವುದನ್ನು ನೋಡಿ ಶಿವನಿಗೆ ಆಶ್ಚರ್ಯವನ್ನುಂಟುಮಾಡಿತು. ಆಗ ಅವನು ವಿಷ್ಣುವನ್ನು ಸ್ಮರಿಸಿದನು. ವಿಷ್ಣು ಶಿವನ ಮುಂದೆ ಬಂದ ಕೂಡಲೇ ಶಿವನು, "ಮಹಾವಿಷ್ಣೂ! ಇಷ್ಟು ಕಾಲದಿಂದ ಯುದ್ಧ ನಡೆಯುತ್ತಿದ್ದರೂ ಶಂಖ ಚೂಡನ ಸೇನೆಗಳು ಸ್ವಲ್ಪವೂ ತಗ್ಗದೆ ಹಾಗೆಯೇ ಇದೆ, ಕಾರಣವೇನಿರಬಹುದು ?" ಎಂದು ಕೇಳಿದನು.

ಅದಕ್ಕೆ ವಿಷ್ಣು, "ಶಂಖಚೂಡನ ಹೆಂಡತಿಯಾದ ತುಲಸಿಯ ಪಾತಿವ್ರತ್ಯವು ಅವನ ಸೇನೆಗಳನ್ನು ಕಾಪಾಡಿಕೊಂಡಿದೆ. ಇದಕ್ಕೆ ಒಂದೇ ಉಪಾಯ. ನಾನು ತುಲಸಿಯ ಪಾತಿವ್ರತ್ಯವನ್ನು ಭಂಗಪಡಿಸು ತ್ತೇನೆ. ಆಗ ನೀನು ಶಂಖಚೂಡನನ್ನು ಸಂಹರಿಸಿ ಬಿಡು" ಎಂದನು.

ಆಮೇಲೆ ವಿಷ್ಣು ಶಂಖಚೂಡನ ರೂಪವನ್ನು ಧರಿಸಿ, ಅವನ ಮನೆಗೆ ಹೋಗಿ ತುಲಸಿಯೊಂದಿಗೆ, "ನೋಡು ತುಲಸೀ, ನಾನು ಶಿವನೊಂದಿಗೆ ಯುದ್ಧ ಮಾಡುತ್ತಿದ್ದೇನೆ. ಜಯಾಪಜಯಗಳು ಇನ್ನೂ ತಿಳಿದಿಲ್ಲ. ನಿನ್ನನ್ನು ಸಂಧಿಸಿ ಬಹಳ ಕಾಲವಾಯಿತು. ನೋಡಿ ತೃಪ್ತನಾಗಿ ಹೋಗೋಣವೆಂದು ಬಂದೆನು" ಎಂದನು.

ತುಲಸಿ ಆ ಮಾತನ್ನು ನಂಬಿ ಸಂತೋಷಪಟ್ಟು ಆ ಮಾಯಾ ಶಂಖಚೂಡನನ್ನು ಬಗೆಬಗೆಯಾಗಿ ಉಪಚರಿಸಿ ಸಂತೋಷಪಡಿಸಿದಳು. ಇದರಿಂದಾಗಿ ಅವಳ ಪಾತಿವ್ರತ್ಯ ಹಾಳಾಯಿತು.

ಆಮೇಲೆ ಶಂಖಚೂಡನ ಸೇನೆಗಳು ವಿಪರೀತ ನಷ್ಟವಾದವು. ಶಿವನು ಸುಲಭವಾಗಿ ಶಂಖಚೂಡ ನನ್ನು ತನ್ನ ತ್ರಿಶೂಲದಿಂದ ಕೊಂದುಬಿಟ್ಟನು.

ಶಂಖಚೂಡನು ಸತ್ತ ದಿನ ರಾತ್ರಿ ತುಲಸಿ ತನ್ನ ಪಕ್ಕದಲ್ಲಿ ಮಲಗಿರುವ ವಿಷ್ಣುವಿನ ನಿಜರೂಪವನ್ನು ನೋಡಿದಳು. ನಿದ್ದೆಯಲ್ಲಿರುವಾಗ ವಿಷ್ಣುವಿನ ಮಾಯಾ ರೂಪ ಅಳಿದು ಹೋಗಿತ್ತು. ಹೀಗೆ ಮಾಯಾ ರೂಪ ದಿಂದ ಬಂದು ತನ್ನನ್ನು ಮೋಸಪಡಿಸಿದ ವಿಷ್ಣುವನ್ನು ಶಿಲೆಯಾಗಿ ಹೋಗುವಂತೆ ತುಲಸಿ ಶಾಪಕೊಟ್ಟಳು.

೧೨. ನಂದೀಶ್ವರನ ಕಥೆ



"ಹಾಗೇ ಆಗಲಿ ತುಲಸೀ. ನೀನು ಗಂಡಕೀ ನದಿಯಾಗಿ ಹರಿಯುತ್ತಿರುವಿ. ನಾನು ಸಾಲಿಗ್ರಾಮ ರೂಪದಲ್ಲಿ ಆ ನದಿಯಲ್ಲಿ ಶಾಶ್ವತವಾಗಿರುತ್ತೇನೆ. ಒಂದು ಗಿಡವು ನಿನ್ನ ಹೆಸರಿನಲ್ಲಿ ತುಲಸೀಗಿಡವೆನಿಸಿ ಆಚಂದ್ರಾರ್ಕ ಸ್ಥಾಯಿಯಾಗಿ ಪೂಜಿಸಲ್ಪಡುತ್ತದೆ" ಎಂದು ಹೇಳಿ ವಿಷ್ಣು ಅವಳನ್ನು ಗೋಲೋಕಕ್ಕೆ ಕರೆದುಕೊಂಡು ಹೋದನು. ಅವಳಿದ್ದ ಸ್ಥಳದಿಂದ ಗಂಡಕೀ ನದಿ ಹರಿಯತೊಡಗಿತು.

ಪೂರ್ವ ಕಾಲದಲ್ಲಿ ಸಾಲಂಕಾಯನೆಂಬೊಬ್ಬ ಮುನಿಗೆ ಶಿಲಾದನೆಂಬ ಹೆಸರಿನ ಒಬ್ಬ ಮಗನಿದ್ದನು. ಆ ಶಿಲಾದನಿಗೆ ಸಂತಾನವಿಲ್ಲದೆ ಹೋಯಿತು. ಅವನು ಕೈಲಾಸಕ್ಕೆ ಹೋಗಿ ಪಾರ್ವತೀ ಪರಮೇಶ್ವರರನ್ನು ಕುರಿತು ಘೋರ ತಪಸ್ಸು ಮಾಡಲು ತೊಡಗಿದನು. ಅವನ ತಪಸ್ಸಿಗೆ ಮೆಚ್ಚಿ ಪಾರ್ವತೀ ಪರಮೇಶ್ವರರು ಅವನ ಮುಂದೆ ಪ್ರತ್ಯಕ್ಷರಾದರು. ಶಿಲಾದನು ತನ್ನ ಕೋರಿಕೆಯನ್ನು ಹೇಳಿದನು. ಅದನ್ನು ಕೇಳಿ ಶಿವ ಪಾರ್ವತಿಯರು "ನಿನಗೆ ಸಂತಾನ ಪ್ರಾಪ್ತಿಯಿಲ್ಲದಿದ್ದರೂ, ಒಬ್ಬ ಮಗನು ಲಭಿಸುತ್ತಾನೆ" ಎಂದು ಹೇಳಿ ಅಂತರ್ಧಾನರಾದರು.

ಶಿಲಾದನು ತನ್ನ ಆಶ್ರಮಕ್ಕೆ ಹಿಂದಿರುಗಿದನು. ಆಮೇಲೆ ಎಷ್ಟು ಕಾಲ ಸಂದರೂ ಮಗನು ಲಭಿಸದೆ ಹೋದುದರಿಂದ ಒಂದು ಯಜ್ಞಮಾಡಲು ತಲೆಹಾಕಿದನು.

ಯಜ್ಞಕುಂಡಕ್ಕಾಗಿ ಶಾಸ್ತ್ರೀಯ ರೀತಿಯಲ್ಲಿ ನೆಲವನ್ನು ಅಗೆಯುತ್ತಿರುವಾಗ ಹೊಂಡದಿಂದ ಸುಂದರನಾದೊಬ್ಬ ಬಾಲಕನು ಎದ್ದು ನಿಂತನು. ಶಿಲಾದನು ಸಂತೋಷಪಟ್ಟು ಆ ಹುಡುಗನಿಗೆ ನಂದನೆಂದು ಹೆಸರಿಟ್ಟು ಬೆಳೆಸತೊಡಗಿದನು.

ಒಂದುಸಾರಿ ಮಿತ್ರಾವರುಣರೆಂಬ ಮುನಿಗಳು ಶಿಲಾದನ ಆಶ್ರಮಕ್ಕೆ ಬಂದು ನಂದನನ್ನು ನೋಡಿ, ಆ ಹುಡುಗನು ಅಲ್ಪಾಯುಷ್ಯದವನೆಂದು ಹೇಳಿದರು. ಆ ಕೆಟ್ಟ ಮಾತು ಕೇಳಿ ಶಿಲಾದನಿಗೆ ದೊಡ್ಡ ಚಿಂತೆ ಹಿಡಿಯಿತು.

ನಂದನು ತಂದೆಯ ಚಿಂತೆಗೆ ಕಾರಣವೇನೆಂದು ಒತ್ತಾಯಿಸಿ ತಿಳಿದು, ಕೇದಾರಕ್ಕೆ ಹೋಗಿ ಪಾರ್ವತೀ ಪರಮೇಶ್ವರರನ್ನು ಧ್ಯಾನಿಸುತ್ತ ತಪಸ್ಸು ಮಾಡಲು ಕುಳಿತನು. ಬಹಳ ಕಾಲದ ಮೇಲೆ ಪಾರ್ವತೀ ಪರಮೇಶ್ವರರು ಅವನ ಮುಂದೆ ಪ್ರತ್ಯಕ್ಷರಾಗಿ, "ಬೇಕಾದ ವರವನ್ನು ಕೇಳು" ಎಂದು ಹೇಳಿದರು.

"ನಾನು ದೀರ್ಘಾಯುಷ್ಮಂತನಾಗಿ ಯಾವಾಗಲೂ ನಿಮ್ಮನ್ನು ಸೇವಿಸುತ್ತ ಲೋಕಪ್ರಸಿದ್ಧನಾಗಿ ಪೂಜಿಸಲ್ಪಡುವಂತೆ ವರವನ್ನು ಕೊಡಿರಿ" ಎಂದು ನಂದನು ಬೇಡಿಕೊಂಡನು.

ಪಾರ್ವತೀ ಪರಮೇಶ್ವರರು ಅವನಿಗೆ ಕೇಳಿದ ವರವನ್ನು ಕೊಟ್ಟು. ಅವನಿಗೆ ನಂದೀಶ್ವರನೆಂದು ಹೆಸರಿಟ್ಟು ಗಣಾಧಿಪತ್ಯವನ್ನು ಕೊಟ್ಟರು. ಶಿವನು ನಂದನಿಗೆ ಗಣಾಧಿಪತ್ಯವನ್ನು ಅಭಿಷೇಕಿಸಲು ತನ್ನ



ಜಟಾಜೂಟದಿಂದ ಗಂಗೆಯನ್ನು ಉಪಯೋಗಿಸಿದನು. ಆ ಅಭಿಷೇಕ ಜಲವು ಐದು ನದಿಗಳಾಗಿ, ತ್ರಿಸ್ರೋತಾ, ಜಟೋದರ, ಸ್ವರ್ಣೋದಕ, ಜಂಬೂ, ವೃಷಧ್ವಜ ಎಂಬ ಹೆಸರುಗಳನ್ನು ಪಡೆದು ಪ್ರವಹಿಸಿತು.

ಹೀಗೆ ಅಭಿಷೇಕಿಸಿದ ನಂದೀಶ್ವರನನ್ನು ಪಾರ್ವತೀ ಪರಮೇಶ್ವರರು ತಮ್ಮೊಂದಿಗೆ ಕೈಲಾಸಕ್ಕೆ ಕರೆದುಕೊಂಡು ಹೋದರು. ತರುವಾಯ ನಂದೀಶ್ವರನು ಮರುತ್ತುಗಳ ಕುಮಾರಿಯಾದ ಸುಕೀರ್ತಿಯನ್ನು ಮದುವೆ ಮಾಡಿಕೊಂಡನು. ನಂದೀಶ್ವರನ ತಾಯಿ ತಂದೆಯರ ಕಡೆಯವರೆಲ್ಲಾ ಶಿವನ ಆಜ್ಞೆಯಂತೆ ರುದ್ರಗಣಗಳೊಂದಿಗೆ ಸೇರಿಹೋದರು.

**ಮ**ಹಾ ಸೃಷ್ಟಿಯ ಆದಿಕಾಲದಲ್ಲಿ ತ್ರಿಮೂರ್ತಿಗಳು ಹುಟ್ಟಿದ್ದರು. ಆಗ ಐದು ಮುಖಗಳಿರುವ ಬ್ರಹ್ಮನು ಶಿವನನ್ನೂ ವಿಷ್ಣುವನ್ನೂ ನೋಡಿ, "ನಾನೇ ನಿಮಗಿಂತ ಹೆಚ್ಚಿನವನಾದ ಪರಬ್ರಹ್ಮ ಸ್ವರೂಪದವನು. ಆದುದರಿಂದ ನೀವು ನನ್ನನ್ನೇ ಸೇವಿಸಬೇಕು" ಎಂದು ಹೇಳಿದನು.

ಬ್ರಹ್ಮನು ಹಾಗೆ ಹೇಳಿದುದನ್ನು ಕೇಳಿ ಶಿವನು ರೌದ್ರಾಕಾರವನ್ನು ತಾಳಿ ಒಂದು ಹೂಂಕಾರ ಮಾಡಲು, ಭಯಂಕರಾಕಾರದಲ್ಲಿ ಮೂರು ಕಣ್ಣುಗಳೊಂದಿಗೆ, ಬೆಳ್ಳಗಿನ ಶರೀರದಿಂದ, ತ್ರಿಶೂಲವೇ ಮೊದಲಾದ ಆಯುಧಗಳನ್ನು ಧರಿಸಿದ ಮೂರ್ತಿಯೊಂದು ಉದ್ಭವವಾಗಿ, ದಿಕ್ಕುಗಳು ದದ್ದರಿಸುವಂತೆ ಡಮರುಕವನ್ನು ಮೊಳಗಿಸುತ್ತ "ಪರಮೇಶ್ವರಾ! ನನ್ನನ್ನು ಏಕೆ ಹುಟ್ಟಿಸಿದೆ? ಏನು ಮಾಡಲಿ?" ಎಂದು ಮಾರ್ಮೊಳಗುವಂತೆ ಪ್ರಶ್ನಿಸಿದನು.

"ಈ ಬ್ರಹ್ಮನನ್ನು ಶಿಕ್ಷಿಸು" ಎಂದನು ಈಶ್ವರ. ಆಗ ಆ ರಾಕ್ಷಸಾಕಾರನು ಬ್ರಹ್ಮನಿಗಿರುವ ಐದು ತಲೆಗಳಲ್ಲಿ ನಡುವಿನ ತಲೆಯನ್ನು ತನ್ನ ಕಿರುಬೆರಳಿನ ಉಗುರಿನಿಂದ ಖಂಡಿಸಿ ತೆಗೆದು ಬಿಸುಟನು. ಆ ತಲೆ ಬಿದ್ದ ಸ್ಥಳವು ಬ್ರಹ್ಮಕಪಾಲವೆನಿಸಿತು. ಬ್ರಹ್ಮನ ತಲೆಯನ್ನು ಖಂಡಿಸಿದ ಸ್ಥಳವು ಕಾಶೀ.

ಹೀಗೆ ಬ್ರಹ್ಮನನ್ನು ಶಿಕ್ಷಿಸಲು ತಾನು ಸೃಷ್ಟಿಸಿದ ರಾಕ್ಷಸಾಕಾರನಿಗೆ ಶಿವನು ಕಾಲಭೈರವನೆಂದು ಹೆಸರು ಇಟ್ಟು, ತನ್ನ ಅಂಗರಕ್ಷಕನಾಗಿರುವಂತೆ ನಿಯಮಿಸಿದನು.

ಆದರೆ ಬ್ರಹ್ಮಹತ್ಯಾ ಪಾತಕವು ಭಯಂಕರ ರೂಪದಿಂದ ಕಾಲಭೈರವನ ಬೆನ್ನು ಹತ್ತಿಕೊಂಡಿತು. ಅದನ್ನು ನೋಡಿ ಈಶ್ವರನು, "ಕಾಲಭೈರವಾ, ನೀನು ಈ ಬ್ರಹ್ಮಹತ್ಯೆಯ ಪಾಪವನ್ನು ತೊಲಗಿಸಿಕೊಳ್ಳಲು ತೀರ್ಥಯಾತ್ರೆ ಮಾಡಿ, ಕಾಶೀಕ್ಷೇತ್ರಕ್ಕೆ ಹೋಗು. ಅಲ್ಲಿ ನಿನಗೆ ಬ್ರಹ್ಮಹತ್ಯಾ ಪಾತಕದಿಂದ ವಿಮುಕ್ತಿಯಾಗುತ್ತದೆ" ಎಂದು ಹೇಳಿ ಕಾಲಭೈರವನನ್ನು ಕಳುಹಿಸಿದನು.

ಆಮೇಲೆ ಕಾಲಭೈರವನು ಬಹಳ ಕಾಲದವರೆಗೆ ತೀರ್ಥಯಾತ್ರೆ ಮಾಡಿ, ಕಡೆಗೆ ಕಾಶೀ ಕ್ಷೇತ್ರವನ್ನು ತಲಪಿ ಗಂಗಾಸ್ನಾನಮಾಡಿ ಪವಿತ್ರನಾಗಿ, ಕಾಶಿಯಲ್ಲೇ

ಇದ್ದು, ಕಾಶೀ ನಗರಕ್ಕೆ ಕ್ಷೇತ್ರಪಾಲಕನಾಗಿ ಭಕ್ತರಿಂದ ಪೂಜಿಸಲ್ಪಡುತ್ತ ಬಂದನು.

ಒಂದಾನೊಂದು ಕಾಲದಲ್ಲಿ ವ್ಯಾಘ್ರಪಾದ ನೆಂಬೊಬ್ಬ ಮುನಿ ಇದ್ದನು. ಅವನ ಪತ್ನಿಯ ಹೆಸರು ವಿಮಲಾ. ಅವರಿಬ್ಬರೂ ಕಡು ನಿಷ್ಠರಾದ ಶಿವ ಭಕ್ತರಾಗಿದ್ದು, ಶಿವನನ್ನು ಆರಾಧಿಸಿಕೊಂಡಿರಲು, ಈಶ್ವರಾನುಗ್ರಹದಿಂದ ಒಬ್ಬ ಕುಮಾರನು ಅವರಿಗೆ ಹುಟ್ಟಿದನು. ಆ ಮಗನಿಗೆ ಅವರು ಉಪಮನ್ಯು ಎಂದು ಹೆಸರಿಟ್ಟರು.

ಶ್ರೀಮಂತರಾದ ವಿಮಲೆಯ ತೌರುಮನೆಯವರು ವಿಮಲೆಯನ್ನೂ, ಉಪಮನ್ಯುವನ್ನೂ ತಮ್ಮ ಮನೆಗೆ ಕರೆದುಕೊಂಡು ಹೋಗಿ, ಸ್ವಲ್ಪ ಕಾಲ ಇರಿಸಿ ಕೊಂಡು ಆಮೇಲೆ ವ್ಯಾಘ್ರಪಾದನ ಬಳಿಗೆ ಕಳುಹಿಸಿಕೊಟ್ಟರು.

ಐದು ವರ್ಷ ವಯಸ್ಸಿನ ಉಪಮನ್ಯು ಒಂದು ದಿನ ತನ್ನ ತಾಯಿಯೊಂದಿಗೆ, "ಅಮ್ಮಾ, ನನಗೆ ಹಾಲು ಬೇಕು, ಕೊಡಮ್ಮ" ಎಂದು ಕೇಳಿದನು.

"ನಮಗೆ ಹಾಲು ಎಲ್ಲಿಂದ ಬರುತ್ತದೆ ಕಂದಾ ? ನಾವು ದರಿದ್ರರು. ನಿನ್ನ ಸೋದರ ಮಾವಂದಿರು ಧನವಂತರಾದುದರಿಂದ ಅಲ್ಲಿ ನಿನಗೆ ಹಾಲು ಮೊಸರು ಬೆಣ್ಣೆ ತುಪ್ಪ ಎಲ್ಲಾ ಸಿಗುತ್ತಿತ್ತು. ನಮ್ಮಲ್ಲಿ ಅದೇನೂ ಇಲ್ಲವಲ್ಲಪ್ಪಾ ! ಹಾಗೆಲ್ಲಾ ಕೇಳಬಾರದು" ಎಂದು ವಿಮಲೆ ಮಗನಿಗೆ ತಿಳಿ ಹೇಳಿದಳು.

ಆದರೂ ಅವನು ಹಾಲಿಗಾಗಿ ಹಟ ಹಿಡಿಯಲು ಅವಳು ಬಿಳಿಹಿಟ್ಟನ್ನು ನೀರಲ್ಲಿ ಬೆರೆಸಿ ಕುಡಿಯಲು ಕೊಟ್ಟರೆ, ಉಪಮನ್ಯು ಅದನ್ನು ಕುಡಿಯದೆ ಒಂದೇ ಸಮನೆ ಅಳತೊಡಗಿದನು.

"ನಾವು ಗತಿಗೇಡಿಗಳಾದ ದರಿದ್ರರೆಂದು ಎಷ್ಟು ಹೇಳಿದರೂ ಹೀಗೆ ಅತ್ತರೆ ನಾನೇನು ಮಾಡಲಪ್ಪಾ !" ಎಂದಳು ತಾಯಿ.

"ನಮ್ಮ ದರಿದ್ರ ಹೋಗುವ ದಾರಿ ಯಾವುದು ಅಮ್ಮಾ ?" ಎಂದು ಉಪಮನ್ಯು ಕೇಳಿದನು.

ವಿಮಲ ತನ್ನ ಮಗನನ್ನು ವ್ಯಾಘ್ರಪಾದನ ಬಳಿಗೆ ಕರೆದುಕೊಂಡು ಹೋಗಿ ನಡೆದ ಸಂಗತಿ ಯನ್ನೆಲ್ಲಾ ಹೇಳಿದಳು. ಅದನ್ನೆಲ್ಲ ಕೇಳಿ ವ್ಯಾಘ್ರ ಪಾದನು ಉಪಮನ್ಯುವಿಗೆ ಶಿವಪಂಚಾಕ್ಷರೀ ಮಂತ್ರವನ್ನು ಉಪದೇಶಮಾಡಿ, "ನೀನು ಕೈಲಾಸ ಪರ್ವತಕ್ಕೆ ಹೋಗಿ ಈ ಮಂತ್ರವನ್ನು ಜಪಿಸಿದಿ ಯೆಂದರೆ ಪಾರ್ವತೀ ಪರಮೇಶ್ವರರು ಪ್ರತ್ಯಕ್ಷರಾಗಿ ನೀನು ಕೇಳುವ ವರವನ್ನು ಕೊಡುತ್ತಾರೆ" ಎಂದು ಹೇಳಿದನು.

ಉಪಮನ್ಯು ಕೈಲಾಸ ಪರ್ವತಕ್ಕೆ ಹೋಗಿ, ಶಿವ ಪಂಚಾಕ್ಷರೀ ಮಂತ್ರವನ್ನು ಜಪಿಸುತ್ತಾ ಕುಳಿತನು.

ಶಿವನು ವಿಕಾರವಾದ ರೂಪದಲ್ಲಿ ಉಪಮನ್ಯುವಿನ ಹತ್ತಿರ ಬಂದು, "ಏನಪ್ಪಾ ಹುಡುಗಾ, ನಿರ್ಜನವಾದ ಈ ಬೆಟ್ಟದ ಅರಣ್ಯದಲ್ಲಿ ಹೀಗೆ ಕುಳಿತಿರುವಿ ಏಕೆ ?

ಕ್ರೂರ ಪ್ರಾಣಿಗಳು ತಿರುಗುವ ಜಾಗವಿದು. ಮನೆಗೆ ಹೋಗಿಬಿಡು " ಎಂದನು.

"ನಾನು ನಿನ್ನ ಹತ್ತಿರ ಏನುಮಾಡಲಿ ಅಂತ ಕೇಳಲಿಲ್ಲ. ನನ್ನನ್ನು ಸುಮ್ಮನೆ ಮಾತಾಡಿಸದೆ ಹೋಗಿಬಿಡು. ನನಗೆ ಪಾರ್ವತೀ ಪರಮೇಶ್ವರರ ರಕ್ಷಣೆ ಇದೆ" ಎಂದು ಹೇಳಿ ಉಪಮನ್ಯು ಕಣ್ಣು ಮುಚ್ಚಿ ಮತ್ತೆ ಜಪಿಸಲು ತೊಡಗಿದನು.

ಮರುಕ್ಷಣದಲ್ಲಿ ಹುಲಿಯ ಗಾಂಧ್ರಿಕೆ, ಅದು ತನ್ನ ಮೇಲೆ ಬರುವ ಹಾಗೆ ಅವನಿಗೆ ಕೇಳಿಸಿತು. ಆದರೆ ಉಪಮನ್ಯು ಕಣ್ಣು ಬಿಡಿಸಲಿಲ್ಲ.

ಪಾರ್ವತೀ ಪರಮೇಶ್ವರರು ಬಾಲ ಉಪಮನ್ಯುವಿನ ಧೈರ್ಯ ಸಾಹಸಗಳಿಗೆ ಮೆಚ್ಚಿ, ಅವನ ಇದಿರಿನಲ್ಲಿ ಪ್ರತ್ಯಕ್ಷರಾಗಿ ನಿಂತರು. ಅವನನ್ನು ಕರೆದು "ನಾವೇ ಬಂದಿದ್ದೇವೆ. ಬೇಕಾದ ವರ ಕೇಳಿಕೋ" ಎಂದರು ಶಿವಪಾರ್ವತಿಯರು.

ಶಿವನು ಪಾರ್ಥಿವಲಿಂಗ ರೂಪದಲ್ಲಿ ದಿನಾ ತನ್ನ ಪೂಜೆಗಳನ್ನು ಸ್ವೀಕರಿಸಬೇಕೆಂದು, ತನಗೆ ಅಷ್ಟೈಶ್ವರ್ಯಗಳೂ ಸಿದ್ಧಿಸಬೇಕೆಂದು ಉಪಮನ್ಯು ವರ ಕೇಳಿಕೊಂಡನು.

ಪಾರ್ವತೀ ಪರಮೇಶ್ವರರು ಅವನು ಕೇಳಿದ ವರಗಳನ್ನು ಕೊಟ್ಟರು. ಉಪಮನ್ಯು ತೃಪ್ತನಾಗಿ ಅಲ್ಲಿಂದ ಹೊರಟು ಮನೆಗೆ ಹಿಂದಿರುಗಿದನು.

ಆಮೇಲೆ ಅವನ ಸುಖಗಳಿಗೆ ಯಾವ ಕೊರತೆಯೂ ಬರಲಿಲ್ಲ.

ಆದಿ ಕಾಲದಲ್ಲಿ ದೇವತೆಗಳೂ ದಾನವರೂ ಯುದ್ಧಗಳನ್ನು ಬಿಡದೆ ಮಾಡಿಕೊಂಡಿರುವಾಗ, ದೇವತೆಗಳು ಅಧಿಕ ಸಂಖ್ಯೆಯಲ್ಲಿ ಸಾಯುತ್ತಿದ್ದರು. ಆಗ ದೇವತೆಗಳು ಮೇರುಪರ್ವತದ ಮೇಲೆ ಹೋಗಿ, ವಿಷ್ಣುವನ್ನು ದರ್ಶನಮಾಡಿ, ತಮಗೆ ಸಾವು ಬಾರದಂತೆ ಮಾಡಬೇಕೆಂದು ಬೇಡಿಕೊಂಡರು.

"ಹಾಗಾಗಬೇಕಾದರೆ ನೀವೂ ದಾನವರೂ ಕೂಡಿ ಕ್ಷೀರ ಸಾಗರದಲ್ಲಿ ಔಷಧಿಗಳನ್ನೆಲ್ಲಾ ಹಾಕಿ, ಮಂದರ ಪರ್ವತವನ್ನು ಕಡಗೋಲಿನ ಹಾಗೆ ಮಾಡಿ ಕಡೆಯಿರಿ. ಆಗ ಕ್ಷೀರಸಾಗರದಲ್ಲಿ ಒಳ್ಳೆಯ ಅಮೃತವು ಸಿಗುತ್ತದೆ. ಅದು ನಿಮಗೆ ಮರಣ ಬಾರದಂತೆ ಮಾಡುತ್ತದೆ" ಎಂದು ವಿಷ್ಣು ಅವರೊಂದಿಗೆ ಹೇಳಿದನು.

ದೇವತೆಗಳು ಹೋಗಿ ಮಂದರ ಪರ್ವತವನ್ನು ಕೀಳಲು ಪ್ರಯತ್ನಮಾಡಿದರು. ಎಷ್ಟೇ ಪ್ರಯತ್ನ ಮಾಡಿದರೂ ಮಂದರ ಪರ್ವತವು ಕದಲಲೇ ಇಲ್ಲ. ಆಗ ದೇವತೆಗಳು ಮತ್ತೆ ಮೇರುಪರ್ವತಕ್ಕೆ ಹೋಗಿ ವಿಷ್ಣುಮೂರ್ತಿಯೊಂದಿಗೆ, ಮಂದರ ಪರ್ವತವನ್ನು ಕೀಳಲು ತಮಗೆ ಸಾಧ್ಯವಾಗಲಿಲ್ಲವೆಂದು ಮೊರೆಯಿಟ್ಟುಕೊಂಡರು.






# ಮೋಸಹೋದ ಕಳ್ಳ

ಒಂದು ಸಾರಿ ನಾಲ್ಕು ಮಂದಿ ಗ್ರಾಮಸ್ಥರು ಸೇರಿ ಒಂದು ಕೆಲಸದ ಮೇಲೆ ಬಾಗ್ದಾದು ನಗರಕ್ಕೆ ಹೋಗಿ, ಅಲ್ಲಿ ಒಂದು ಛತ್ರವನ್ನು ಹಿಡಿದು ತಂಗಿದರು. ಆಮೇಲೆ ಏನೋ ಅಗತ್ಯ ವಸ್ತುಗಳನ್ನು ಕೊಂಡುಕೊಳ್ಳಲಿಕ್ಕಾಗಿ ಪೇಟೆಯ ಕಡೆಗೆ ಹೋದರು.

ಅವರ ನಡವಳಿಕೆಗಳನ್ನೆಲ್ಲ ಗಮನಿಸಿಕೊಂಡಿದ್ದ ಒಬ್ಬ ಕಳ್ಳನು, ಅವರು ಒಗೆದು ಒಣಗಹಾಕಿದ್ದ ಹಳೆಯ ಬಟ್ಟೆಗಳನ್ನು ಕದ್ದುಕೊಂಡು ಓಡಿಬಿಟ್ಟನು.

ಆ ಕಳ್ಳನು ತನಗೆ ದೊರಕಿದ ಬಟ್ಟೆಗಳೊಂದಿಗೆ ಇನ್ನೂ ಕೆಲವು ಬಟ್ಟೆಗಳನ್ನು ಕೂಡಾ ಸೇರಿಸಿ ಸಂತೆಗೆ ಒಯ್ದು, ಅಲ್ಲಿ ಅವುಗಳನ್ನು ಮಾರಲು ಪ್ರಯತ್ನಿಸಿದನು. ಆದರೆ ಅಂಗಿ ಬಟ್ಟೆಗಳೆಲ್ಲ ಹಳೆಯವಾದುದರಿಂದ ಕೊಂಡುಕೊಳ್ಳಲು ಯಾರೂ ಮುಂದೆ ಬರಲಿಲ್ಲ. ಯಾವನಾದರೂ ಒಬ್ಬ ಹೆಡ್ಡನು ತನ್ನ ಬಲೆಯಲ್ಲಿ ಬೀಳದೆ ಹೋಗನೆಂಬ ನಂಬುಗೆಯಲ್ಲಿ ಕಳ್ಳನು ಆ ದುಸ್ತುಗಳನ್ನು ಪಕ್ಕದಲ್ಲಿಟ್ಟುಕೊಂಡಿದ್ದನು.

ಆ ಸಮಯದಲ್ಲಿ ಒಂದು ಕೋತಿ ಅತ್ತಿತ್ತ ಹಾರುತ್ತ ಕುಣಿಯುತ್ತ, ಕುಪ್ಪಳಿಸುತ್ತ ಅವನ ಹತ್ತಿರ ಬಂದಿತು. ಕಳ್ಳನು ಅದರ ಆಟಗಳನ್ನು ನೋಡುತ್ತ ವಿನೋದಿಸಿಕೊಂಡಿದ್ದಾಗ ಆ ಕೋತಿಯ ಯಜಮಾನ ಮೆಲ್ಲನೆ ಬದಿಯಿಂದಾಗಿ ಬಂದು ಕಳ್ಳನ ಪಕ್ಕದಲ್ಲಿದ್ದ ಬಟ್ಟೆಗಳನ್ನು ಎತ್ತಿಕೊಂಡು ಮೆಲ್ಲನೆ ಅತ್ತ ಜಾರಿಕೊಂಡನು. ಅವನು ಕೋತಿ ಸಹಾಯದಿಂದ ಕಳವು ಮಾಡುವ ಇನ್ನೊಬ್ಬ ಕಳ್ಳ!

ಸ್ವಲ್ಪಹೊತ್ತಿನ ಮೇಲೆ ಮೊದಲನೇ ಕಳ್ಳ ತನ್ನ ಹತ್ತಿರವಿದ್ದ ಬಟ್ಟೆಗಳು ಕಾಣದೆ ಹೋದುದನ್ನು ನೋಡಿ, "ಕಳ್ಳ! ಕಳ್ಳ!" ಎಂದು ಕೂಗಲು, ನಾಲ್ಕಾರು ಮಂದಿ ಸುತ್ತಲೂ ಸೇರಿದರು. ಅಷ್ಟು ಹೊತ್ತಿಗೆ ಎರಡನೇ ಕಳ್ಳ ಅಲ್ಲೆಲ್ಲಿಯೂ ಇರಲಿಲ್ಲ.

ಮರುದಿನ ನಗರದೊಳಗಿನ ಮತ್ತೊಂದು ಭಾಗದ ಸಂತೆಯಲ್ಲಿ ಮೊದಲನೇ ಕಳ್ಳನು, ಒಳ್ಳೆಯ ಅಟ್ಟೆಯ ಪೆಟ್ಟಿಗೆಗಳಲ್ಲಿ ಭದ್ರಪಡಿಸಲ್ಪಟ್ಟ ಬಟ್ಟೆಗಳ ವ್ಯಾಪಾರಿಯನ್ನು ನೋಡಿದನು. ಅವುಗ ಯಜಮಾನನು ಗಟ್ಟಿಯಾದ ಧ್ವನಿಯಲ್ಲಿ, "ಅಯ್ಯಗಳಿರಾ! ಬಟ್ಟೆಗಳ ವ್ಯಾಪಾರವು ನನಗೇನೂ ಕೂಡಿ ಬರಲಿಲ್ಲ. ಆದ್ದರಿಂದ ನನ್ನ ಜವಳೀ ಅಂಗಡಿಯನ್ನು ಖಾಲಿಮಾಡಿ, ಇರುವ ಸ್ವಲ್ಪ ಬಟ್ಟೆಗಳನ್ನು ತುಂಬಾ ಅಗ್ಗಕ್ಕೇ ಮಾರುತ್ತಿದ್ದೇನೆ. ಇಂಥಾ ಸಂದರ್ಭವು

ಯಾವಾಗಲೂ ಬಾರದು. ಬನ್ನಿ, ತೆಗೆದುಕೊಳ್ಳಿ!" ಎಂದು ಕೂಗಿ ಕೂಗಿ ಹೇಳುತ್ತಿದ್ದನು.

ಮೊದಲನೇ ಕಳ್ಳನಿಗೆ ಅವುಗಳ ಬೆಲೆ ನಿಜವಾಗಿಯೂ ಬಹಳ ಕಡಿಮೆ ಎಂಬ ನಂಬುಗೆ ಬಂದಿತು. ಅವನು ಒಂದು ಅಟ್ಟೆಯ ಪೆಟ್ಟಿಗೆಯನ್ನು ಕೈಯಲ್ಲೆತ್ತಿಕೊಂಡು, ಅದಕ್ಕೆ ಕಟ್ಟಿದ್ದ ದಾರವನ್ನು ಬಿಚ್ಚಲು ನೋಡಿದನು. ವ್ಯಾಪಾರಿ ಕೋಪದಿಂದ, "ಹಣ ಕೊಟ್ಟು ಕೊಂಡು ಕೊಂಡು ಆಮೇಲೆ ಪೆಟ್ಟಿಗೆ ಬಿಚ್ಚಬೇಕು. ಕಾಲ ಸರಿಬಾರದೆ ಎಷ್ಟೋ ಬೆಲೆಯುಳ್ಳ ವಸ್ತ್ರಗಳನ್ನು, ಬಟಾಣಿ ಕಾಳುಗಳಿಗಿಂತ ಅಗ್ಗವಾಗಿ ಮಾರುತ್ತಿರುವುದು ಕಾಣುವುದಿಲ್ಲವೇನು?" ಎಂದನು.

ಮೊದಲನೇ ಕಳ್ಳನಿಗೆ ವ್ಯಾಪಾರಿಯ ಮಾತು ಸರಿಯೆಂದೇ ತೋರಿತು. ವಸ್ತ್ರಗಳನ್ನು ಇನ್ನೆಲ್ಲಾದರೂ ಲಾಭಕ್ಕೆ ಮಾರಬಹುದು ಎಂದುಕೊಂಡು, ವ್ಯಾಪಾರಿಗೆ ಹಣಕೊಟ್ಟು ಅವುಗಳನ್ನು ಕೊಂಡುಕೊಂಡನು. ಹಣ ಸಿಕ್ಕಿದ ಕೂಡಲೇ ಆ ವ್ಯಾಪಾರಿ, "ಪುಣ್ಯಾತ್ಮ, ಕೂಗಿ ಕೂಗಿ ಗಂಟಲೊಣಗಿತು!" ಎನ್ನುತ್ತಾ ಹೊರಟು ಹೋಗಿಬಿಟ್ಟನು.

ಕಳ್ಳನು ಒಂದು ಅಟ್ಟೆಪೆಟ್ಟಿಗೆಯ ದಾರವನ್ನು ಬಿಚ್ಚಿ ಒಳಗಿರುವ ವಸ್ತ್ರಗಳನ್ನು ನೋಡಿ ನಡುಗಿಬಿದ್ದನು. ಅದೆಲ್ಲ ಮುಂಚಿನ ದಿನ ಅವನು ಛತ್ರದಲ್ಲಿ ಕದ್ದುಕೊಂಡ ವಸ್ತ್ರಗಳೇ! ಉಳಿದ ಪೆಟ್ಟಿಗೆಗಳನ್ನೆಲ್ಲಾ ಬಿಚ್ಚಿ ನೋಡಿದರೆ ಅದರಲ್ಲಿ ಅವನು ಮೊದಲು ಕದ್ದ ವಸ್ತ್ರಗಳಷ್ಟೂ ಇದ್ದುವು. ವಸ್ತ್ರಗಳ ವ್ಯಾಪಾರಿಯೆಂದು ಹೇಳಿ ಮೋಸ ಮಾಡಿದವನು ಉಪಯೋಗವಿಲ್ಲದ ವಸ್ತ್ರಗಳನ್ನು ಒಳ್ಳೆಯ ಅಟ್ಟೆಯ ಪೆಟ್ಟಿಗೆಗಳಲ್ಲಿ ಭದ್ರಪಡಿಸಿ ತನಗೆ ಮೋಸ ಮಾಡಿದನೆಂದು ತಿಳಿಯಿತು.

ಕಳ್ಳನ ಬುದ್ಧಿ ಮಂಕಾದಂತಾಗಿ, ಕಣ್ಣೀರು ತುಂಬಿಕೊಂಡು, "ಛತ್ರದಲ್ಲಿ ನಾನು ಕಳವು ಮಾಡುವಾಗ ಯಾರಾದರೂ ಹಿಡಿದುಬಿಡುತ್ತಾರೇನೋ ಎಂದು ತುಂಬಾ ಹೆದರಿದೆ. ಇವುಗಳನ್ನು ಮತ್ತೊಬ್ಬನು ಕಳವು ಮಾಡಿದಾಗ ಜೀವವೇ ಹೋದ ಹಾಗಾಯಿತು. ಅದು ಸಾಲದ್ದಕ್ಕೆ ಇವುಗಳಿಗೆ ಹಣ ಬೇರೆ ಕೊಟ್ಟುಬಿಟ್ಟೆನು. ಛೀ ಛೀ! ಇವುಗಳಿಗೆಲ್ಲಾ ಕಾರಣ ಆ ಗ್ರಾಮಸ್ಥರು ಕೊಟ್ಟ ಶಾಪಗಳೇ ಆಗಿರಬೇಕು. ಇನ್ನೂ ಇವುಗಳನ್ನು ಹತ್ತಿರ ಇಟ್ಟುಕೊಂಡರೆ ಇನ್ನೆಷ್ಟು ಸಂಕಷ್ಟಗಳಿಗೆ ಗುರಿಯಾಗಬೇಕೋ!" ಎಂದು ಹೆದರಿದನು.

ಅವನು ಆ ಬಟ್ಟೆಗಳನ್ನೆಲ್ಲಾ ಒಂದೇ ಗಂಟಾಗಿ ಕಟ್ಟಿ, ತುಂಬಾ ಕತ್ತಲೆಯಾದ ಮೇಲೆ ಛತ್ರಕ್ಕೆ ಹೋಗಿ, ಜಗಲಿಯ ಮೇಲೆ ನಿದ್ರಿಸಿಕೊಂಡಿದ್ದ ಆ ನಾಲ್ವರು ಗ್ರಾಮಸ್ಥರ ಪಕ್ಕದಲ್ಲಿ ಆ ಮೂಟೆಯನ್ನಿಟ್ಟು, ಹಿಂದಿರುಗಿ ನೋಡದೆ ಅಲ್ಲಿಂದ ಓಡಿಹೋದನು.



# ದೈವಚಿಂತನೆ

ಸಿರಿಪುರವೆಂಬ ಗ್ರಾಮದಲ್ಲಿ ಕೃಷ್ಣಶಾಸ್ತ್ರಿ ಎಂಬ ಪಂಡಿತನೊಬ್ಬನಿದ್ದನು. ಅವನು ಪ್ರತಿ ವರ್ಷವೂ ನವರಾತ್ರಿಯ ಸಮಯದಲ್ಲಿ ಉತ್ಸವದ ಏರ್ಪಾಟು ಮಾಡಿ, ಗ್ರಾಮಸ್ಥರಿಗೆ ದೈವಚಿಂತನೆಯ ವಿಷಯದಲ್ಲಿ ಬೋಧನೆ ಮಾಡುತ್ತಿದ್ದನು. ಅವನು ಒಳ್ಳೆಯ ಭಾಷಣಕಾರನಾಗಿದ್ದುದರಿಂದ ಉತ್ಸವಕ್ಕೆ ಅನೇಕವಾಗಿ ಗ್ರಾಮಸ್ಥರೆಲ್ಲರೂ ಬಂದು ಸೇರುತ್ತಿದ್ದರು. ಸಭೆಗಳು ಜಯಪ್ರದವಾಗಿ ಜರುಗುತ್ತಿದ್ದುವು.

ಕೃಷ್ಣಶಾಸ್ತ್ರಿಗೆ ಹರಿದಾಸನೆಂಬ ಒಬ್ಬ ಮಗನಿದ್ದನು. ಅವನೂ ಸಕಲ ಶಾಸ್ತ್ರಗಳನ್ನೂ ಅಭ್ಯಾಸ ಮಾಡಿ, ತಂದೆಗೆ ಸಮಾನನಾಗಿಯೇ ಶಾಸ್ತ್ರ ತತ್ವಗಳನ್ನು ಅವಗಾಹನೆ ಮಾಡಿಕೊಂಡಿದ್ದನು. ಆದರೆ ಇನ್ನೂ ಸಭೆಗಳ ಮುಂದೆ ನಿಲ್ಲುವ ಅವಕಾಶ ಬಂದಿರಲಿಲ್ಲ.

ಒಂದು ವರ್ಷದ ಉತ್ಸವ ಕಾಲದಲ್ಲಿ ಎರಡು ದಿನಗಳ ಸಭೆಗಳು ನಡೆದ ಮೇಲೆ, ಥಟ್ಟನೆ ಕೃಷ್ಣಶಾಸ್ತ್ರಿಗೆ ಆರೋಗ್ಯ ಕೆಟ್ಟಿತು. ಅವನು ಹರಿದಾಸನನ್ನು ಸಭಾಕಾರ್ಯ ಮುಗಿಸಲು ಹೇಳಿ ಕಳುಹಿಸಿಕೊಟ್ಟನು.

ಆ ದಿನ ವೇದಿಕೆಯ ಮೇಲೆ ಕೃಷ್ಣಶಾಸ್ತ್ರಿಗೆ ಬದಲು ಹರಿದಾಸನು ಬಂದುದನ್ನು ನೋಡಿ, ಗ್ರಾಮಸ್ಥರು ತಮ್ಮ ಮನೆಗೆ ಹೊರಟು ಹೋಗಲು ಎದ್ದರು.

ಆಗ ಹರಿದಾಸನು ಸಭಿಕರನ್ನು ನೋಡಿ "ಅಯ್ಯಾ, ಭಕ್ತ ಜನಗಳಿರಾ ! ಒಂದು ಬಿನ್ನಹ. ಈ ದಿನ ರೋಗ್ಯ ಸರಿ ಇಲ್ಲದ್ದರಿಂದ ಕೃಷ್ಣಶಾಸ್ತ್ರಿಗಳು ಬರಲಾಗದೆ ಹೋದರು. ಆದುದರಿಂದ ಕೃಷ್ಣಶಾಸ್ತ್ರಿಗಳನ್ನು ಮಾತ್ರ ಸ್ಮರಿಸಲು ಬಂದವರೆಲ್ಲಾ ಎದ್ದು ಹೊರಟು ಹೋಗಬಹುದು. ಭಗವಂತನನ್ನು ಸ್ಮರಿಸಲು ಬಂದವರು ಮಾತ್ರ ಶಾಂತರಾಗಿ ಕುಳಿತುಕೊಳ್ಳಬೇಕು" ಎಂದನು.

ಇದನ್ನು ಕೇಳಿ ಎಲ್ಲರೂ ನಿಃಶಬ್ದವಾಗಿ ಕುಳಿತರು.





# ನಿರ್ಲಕ್ಷ್ಯದವನು

**ಹಿಂದೆ** ಸುವರ್ಣ ದೇಶದ ರಾಜಕುಮಾರಿ ಮೋಹಿನೀದೇವಿ ಅಪೂರ್ವ ಸುಂದರಿ ಎಂದು ಹೆಸರು ಪಡೆದಿದ್ದಳು. ಅವಳ ಸೌಂದರ್ಯಾತಿಶಯಕ್ಕೆ ತಕ್ಕಹಾಗೆ ಒಳ್ಳೆಯ ಗರ್ವವೂ ಅವಳಿಗಿತ್ತು. ಅವಳಿಗೆ ಮದುವೆಯ ವಯಸ್ಸು ಬಂದಾಗ, ಅವಳಿಗೆ ತಕ್ಕ ವರನು ಯಾವನೋ ಎಲ್ಲಿರುವನೋ ಎಂಬುದೊಂದೂ ಗೊತ್ತಾಗದೆ ರಾಜನಿಗೆ ಅವಳೊಂದು ದೊಡ್ಡ ಸಮಸ್ಯೆಯಾಗಿಬಿಟ್ಟಳು. ಯಾವ ದೇಶದ ಎಂತಹ ಸುಂದರ ರಾಜಕುಮಾರನ ಚಿತ್ರಪಟವನ್ನು ತರಿಸಿ ತೋರಿಸಿದರೂ ಅವನು ತನ್ನ ಅಂದಚೆಂದಗಳಿಗೆ ಸರಿಯಾದವನಲ್ಲವೆಂದು ಹೇಳಿ ಮೋಹಿನಿ ನಿರಾಕರಿಸುತ್ತಿದ್ದಳು. ಎಂತಹ ಸುರಸುಂದರನೂ ಅವಳಿಗೆ ಈಡಾಗಿಲ್ಲವೆಂದು ಹೇಳುತ್ತಿದ್ದಳು.

ಈ ಪರಿಸ್ಥಿತಿಯಲ್ಲಿ ಒಂದು ದಿನ ಅವಳು ಉದ್ಯಾನದಲ್ಲಿ ವಿಹರಿಸಿಕೊಂಡಿರುವಾಗ, ಅಕಸ್ಮಾತ್ತಾಗಿ ಕೆಲಮಂಧಿ ಕಳ್ಳರು ಹೇಗೋ ಅಲ್ಲಿಗೆ ಬಂದರು. ಅವರಲ್ಲಿ ಪಾಷಂಡನೆಂಬುವನು ಕಳ್ಳರ ನಾಯಕನಾಗಿದ್ದನು. ಅವನು ರಾಜಕುಮಾರಿ ಮೋಹಿನಿಯನ್ನು ಅನಾಯಾಸವಾಗಿ ಹಿಡಿದೆತ್ತಿ ತನ್ನ ಕುದುರೆಯ ಮೇಲೆ ಹಾಕಿ, ದೌಡಾಯಿಸಿಕೊಂಡು ಹೋಗಿ, ಎಲ್ಲೋ ಇದ್ದ ಒಂದು ಬೆಟ್ಟದ ಗುಹೆಯೊಳಗೆ ಪ್ರವೇಶಿಸಿದನು. ಅದುವೇ ಅವನ ವಾಸಸ್ಥಳವಾಗಿತ್ತು. ಅದುವೇ ಕಳ್ಳರ ನಿವಾಸ ಸ್ಥಾನವಾಗಿಯೂ ಇತ್ತು.

ಆ ಬೆಟ್ಟದ ಗುಹೆಯೊಳಗೆ ಒಂದು ಕುಟುಂಬ ವಿದ್ದಿತು. ಅವರಲ್ಲಿ ಪಾತಕಿ ಎಂಬುವಳು ಪಾಷಂಡನ ಹೆಂಡತಿ. ನಾಲ್ಕು ವರ್ಷ ವಯಸ್ಸಿನ ರೋದಿನಿ ಅವರ ಮಗಳು. ಅವರ ಕೆಲಸಗಳನ್ನು ಮಾಡಲಿಕ್ಕಾಗಿ ಇಬ್ಬರು ವೃದ್ಧರೂ, ಒಬ್ಬಳು ನಡು ವಯಸ್ಸಿನವಳೂ ಅಲ್ಲಿದ್ದರು.

ಪಾಷಂಡನು ರಾಜಕುಮಾರಿಯೊಂದಿಗೆ, "ನೋಡು, ಇದು ನನ್ನ ಗುಹೆಮನೆ. ಇಲ್ಲಿರುವುದು ನನ್ನ ಕುಟುಂಬ ಮಾತ್ರವೇ. ನಾನು ಕಳ್ಳರ ನಾಯಕ. ನನ್ನ ಅನುಚರರಾರೂ ನನ್ನ ಅಪ್ಪಣೆಯಿಲ್ಲದೆ ಈ ಪ್ರಾಂತಕ್ಕೆ ಬರುವವರಲ್ಲ. ಆದುದರಿಂದ ಯಾವ ಭಯವೂ ನಿನಗಿಲ್ಲ" ಎಂದನು.

"ನಿನ್ನ ಉದ್ದೇಶ ಏನೆಂಬುದನ್ನೇ ಹೇಳಲಿಲ್ಲ. ನೀನು ನನ್ನನ್ನು ಇಲ್ಲಿಗೆ ಏತಕ್ಕಾಗಿ ತೆಗೆದು



ಕೊಂಡು ಬಂದಿ ? ಸ್ಪಷ್ಟವಾಗಿ ಹೇಳಿಬಿಡು " ಎಂದು ಮೋಹಿನಿ ಕೋಪದಿಂದ ಕೇಳಿದಳು.

ಪಾಷಂಡನು ಶಾಂತ ರೀತಿಯಲ್ಲಿ " ನನ್ನ ಹೆಂಡತಿಗೆ ಇಲ್ಲಿ ಎಲ್ಲಾ ಸೌಕರ್ಯಗಳೂ ಇವೆ. ಆದರೂ ಕಳ್ಳನಾದ ನನ್ನ ನಿವಾಸವು ಬೆಟ್ಟದ ಗುಹೆಯಾದುದರಿಂದ ಅವಳು ಯಾವಾಗಲೂ ನನ್ನನ್ನು ತರಾಟೆಗೆ ತೆಗೆದುಕೊಳ್ಳುತ್ತಿದ್ದಾಳೆ. ನನ್ನನ್ನು ಹೀಗೆ ವೇಧಿಸಬೇಡ, ನಿನಗೇನು ಬೇಕೋ ಕೇಳು ತಂದುಕೊಡುತ್ತೇನೆ ಎಂದು ಒಂದುಸಾರಿ ಹೇಳಿಬಿಟ್ಟೆನು. ಹಾಗಾದರೆ ನನಗೆ ಈ ದೇಶದ ರಾಜಕುಮಾರಿಯಿಂದ ಸೇವೆ ಮಾಡಿಸು, ನೋಡೋಣ ಎಂದಳು. ಸರಿಯೆಂದು ನಾನು ಬಂದು ನಿನ್ನನ್ನು ಅಪಹರಿಸಿ ಇಲ್ಲಿಗೆ ತಂದೆನು. ಈಗ ಇಲ್ಲಿ ನಿನ್ನ ಕೆಲಸ ಏನೆಂದು ಗೊತ್ತಾಯಿತಷ್ಟೆ ? " ಎಂದನು.

ಆ ಮಾತನ್ನು ಕೇಳಿ ಮೋಹಿನಿ ಆಶ್ಚರ್ಯಪಟ್ಟು ಪಾಷಂಡನ ಮುಖವನ್ನೇ ಸ್ವಲ್ಪ ಹೊತ್ತು ಪರೀಕ್ಷಿಸಿ ನೋಡಿದಳು. ಅವನು ಆರಡಿ ಎತ್ತರದ ಒಳ್ಳೆಯ ಗಟ್ಟಿಮುಟ್ಟಾದ ಯುವಕ. ಅಚ್ಚ ಬಂಗಾರದ ಬಣ್ಣದ ಶರೀರ ಛಾಯೆ. ಖಂಡಪುಷ್ಟಿಯ ಕೈಕಾಲುಗಳು. ಸುಂದರವಾದ ಮುಖಾಕೃತಿ. ಅವನ ಹೆಂಡತಿಯಾದ ಪಾತಕಿ ರೂಪದಲ್ಲಿ ಅವನಿಗೆ ಪೂರ್ತಿ ವಿರುದ್ಧಳಾಗಿದ್ದಳು. ಕರ್ರಗೆ ದಪ್ಪಗಿನ ವಿಕಾರವಾದ ಕುಳ್ಳು ಶರೀರಾಕೃತಿ ಅವಳದು. ಅವಳ ಮಗಳು ರೋದಿನಿ ಅಚ್ಚ ತಾಯಿಯ ಹೋಲಿಕೆಯವಳೇ !

ಪಾಷಂಡನು ಮೋಹಿನಿಯೊಂದಿಗೆ ಮಾತಾಡಿಕೊಂಡಿರುವಾಗ ಅಲ್ಲಿರುವ ವೃದ್ಧ ಸೇವಕನೊಬ್ಬನು " ಅಹ! ಅಂದಚೆಂದಗಳ ರಾಶಿಯೇ ಗುಹೆಯೊಳಗೆ ಬಂದಿದೆ. ನಾಯಕನು ಇವಳನ್ನು ತಪ್ಪದೆ ಮದುವೆ ಮಾಡಿಕೊಳ್ಳುತ್ತಾನೆ " ಎಂದನು.

ಆ ಮಾತು ಕೇಳಿದ ಪಾಷಂಡನು ತಟ್ಟನೆ ಅವನ ಬಳಿಗೆ ಹೋಗಿ ಅವನ ದವಡೆಯ ಮೇಲೆ ಗಟ್ಟಿಯಾಗಿ ಬಾರಿಸಿ, " ನಾನು ಏಕಪತ್ನೀ ವ್ರತ ಹಿಡಿದವನು. ಇಂತಹ ಮಾತು ಇನ್ನೊಮ್ಮೆ ಹೇಳಿದರೆ ನಿನ್ನನ್ನು ಬಲಿಹಾಕಿಬಿಡುತ್ತೇನೆ ! ಯಾರ ಬಾಯಿಯಿಂದಲೂ ಈ ಬಗೆಯ ಕೆಟ್ಟ ಮಾತು ಬರಬಾರದು ! ಜೋಕೆ ! " ಎಂದು ಗುಡುಗಿದನು.

ಇಷ್ಟವಿದ್ದರೂ ಇಲ್ಲದಿದ್ದರೂ ಮೋಹಿನಿ ಆ ಗುಹೆಯಲ್ಲಿ ಇರಲೇಬೇಕಾಯಿತು. ಮೊದಲು ಅವಳು ಪಾತಕಿಗೆ ಸೇವೆಮಾಡಲು ಸಾಧ್ಯವಿಲ್ಲವೆಂದಳು, ಹೀಗೆ ಹಟ ಹಿಡಿದರೆ ಪಾಷಂಡನು ಎಷ್ಟು ಕ್ರೂರ ಶಿಕ್ಷೆ ವಿಧಿಸುವನೆಂದು ಉಳಿದ ಸೇವಕರು ಹೇಳಿದ ಮೇಲೆ, ಅವಳು ಹೆದರಿ ತಗ್ಗಿ ಒಳ್ಳೆಯ ಬುದ್ಧಿ ತಂದುಕೊಂಡವಳಂತೆ ಪಾತಕಿಯ ಸೇವೆ ಮಾಡಲು ತೊಡಗಿದಳು.

ಅಲ್ಲಿರುವವರಲ್ಲಿ ದೀಪಕನೆಂಬ ವೃದ್ಧ ಸೇವಕನಿಗೆ ಮೋಹಿನಿಯ ಮೇಲೆ ಅಯ್ಯೋ ಪಾಪವೆನಿಸುತ್ತ ಕರುಣೆ ಬರತೊಡಗಿತು. ಅವನು ಒಂದು ದಿನ



ಅವಳಿಗೆ ಸಮಾಧಾನ ಹೇಳುತ್ತ, "ನೀನೇನೋ ಅಪ್ಸರೆಯ ಹಾಗಿರುವಿ! ನಿನಗೆ ಇಂತಹ ಕಷ್ಟ ಬರಬಾರದಿತ್ತು. ಇಲ್ಲಿಂದ ಹೊರಬೀಳ ಬೇಕಾದರೆ ನಿನಗೆ ಒಂದೇ ಒಂದು ದಾರಿಯಿದೆ. ನಿನ್ನ ಅಂದಚೆಂದದ ಒಯ್ಯಾರಗಳಿಂದ ನಮ್ಮ ನಾಯಕನನ್ನು ಆಕರ್ಷಿಸಿ, ಅವನಿಗೆ ತಕ್ಕ ಹೆಂಡತಿ ನೀನೇ ಎಂದು ಅವನು ತಿಳಿಯುವ ಹಾಗೆ ಮಾಡು. ಅವನು ನಿನ್ನನ್ನು ಮದುವೆಮಾಡಿಕೊಂಡು ಬಿಟ್ಟರೆ ನಿನ್ನ ಕಷ್ಟಗಳೆಲ್ಲಾ ತೊಲಗುತ್ತವೆ" ಎಂದು ಹೇಳಿದನು.

"ಛೀ, ಛೀ! ನಾನು ಒಂದು ದೇಶದ ಯುವ ರಾಣಿಯಾಗಿರುವವಳು. ಒಬ್ಬ ಕಳ್ಳರ ನಾಯಕನನ್ನು ಮದುವೆ ಮಾಡಿಕೊಳ್ಳುತ್ತೇನೇನು?" ಎಂದಳು ಮೋಹಿನಿ ಕೋಪದಿಂದ.

"ಅಮ್ಮಾ, ನಮ್ಮ ನಾಯಕನು ಕಳ್ಳರ ಒಡೆಯನಾದರೂ ಇವನು ಯಾವ ರಾಜಕುಮಾರನಿಗೂ ಕಡಿಮೆಯವನಲ್ಲ. ಇವನ ಸರಿಸಮಾನತೆಗೆ ನಿಲ್ಲುವ ರಾಜಕುಮಾರನೇ ಪ್ರಪಂಚದಲ್ಲಿರಲಿಕ್ಕಿಲ್ಲ. ಮದುವೇ ಸಂಗತಿ ಹೇಗಾದರಿರಲಿ. ನೀನು ಅವನನ್ನು ಆಕರ್ಷಿಸಲು ಪ್ರಯತ್ನಮಾಡು. ಇಲ್ಲಿಂದ ತಪ್ಪಿಸಿಕೊಳ್ಳಲಿಕ್ಕೆ ಅದೊಂದು ಉಪಾಯವೆಂದೇ ಅಂದುಕೋ! ಇಲ್ಲದಿದ್ದರೆ ನೀನು ಇಲ್ಲಿಂದ ಹೊರಬೀಳಲು ಸಾಧ್ಯವೇ ಇಲ್ಲ" ಎಂದನು ದೀಪಕ.

ಬೇರೆ ದಾರಿ ಇಲ್ಲದೆ ಮೋಹಿನಿ ಅವನು ಹೇಳಿದಂತೆ ಮಾಡಲು ಒಪ್ಪಿಗೆ ಸೂಚಿಸಿದಳು.

ಒಂದು ದಿನ ಅವಳು ಸ್ನಾನಮಾಡಿ ಒಳ್ಳೆಯ ಬಟ್ಟೆಗಳನ್ನು ಧರಿಸಿಕೊಂಡಳು. ಅಂದಿನ ಅವಳ ಕೆಂಬಣ್ಣದ ವಸ್ತ್ರಗಳು ಅವಳ ಅಂದವನ್ನು ಇಮ್ಮಡಿಸಿದುವು. ಆ ಸುಂದರಾಕಾರದಲ್ಲಿ ಅವಳು ಪಾಷಂಡನಿರುವಲ್ಲಿ ಅತ್ತಿತ್ತ ತಿರುಗಾಡಿದಳು. ಏನೋ ತೀವ್ರಾಲೋಚನೆಯಲ್ಲಿದ್ದ ಪಾಷಂಡನು ಅವಳನ್ನು ಗಮನಿಸಲಿಲ್ಲ.

ಸ್ವಲ್ಪ ಹೊತ್ತಿನ ಮೇಲೆ ಪಾಷಂಡನು ಅವಳ ಕಡೆಗೆ ತಿರುಗಿ, ತನ್ನ ಹತ್ತಿರ ಬರುವಂತೆ ಕರೆದು, "ಇವತ್ತು ನೀನು ಬಹಳ ಚೆನ್ನಾಗಿರುವಿ. ಆದರೆ ನೀಲಿರಂಗಿನ ವಸ್ತ್ರಗಳಲ್ಲಿ ನೀನು ಇನ್ನೂ ಚೆನ್ನಾಗಿ ಕಾಣುವಿ. ಹಾಗೆ ಮಾಡು" ಎಂದನು.

"ಅದು ನಿನಗೆ ಹೇಗೆ ಗೊತ್ತು?" ಎಂದು ಕೇಳಿದಳು ಮೋಹಿನಿ.

"ನನ್ನ ಹೆಂಡತಿ ಹೇಳಿದಳು. ಸೌಂದರ್ಯವನ್ನು ಕುರಿತು ಅವಳಿಗಿರುವಷ್ಟು ಜ್ಞಾನ ಬೇರೆ ಯಾರಿಗೂ ತಿಳಿಯದು. ಅವಳು ಹೇಳಿದರೆ ಅದು ಸರಿಯಾಗಿರುತ್ತದೆ" ಎಂದನು ಪಾಷಂಡ.

ಅದನ್ನು ಕೇಳಿ ಮೋಹಿನಿಗೆ ಬಹಳ ಕೋಪ ಬಂದಿತು. ಆದರೂ ಅದನ್ನು ಹೊರಗೆ ತೋರಿಸಲಾಗದೆ, ಮತ್ತೊಂದು ದಿನ ನೀಲ ಬಣ್ಣದ ಬಟ್ಟೆಗಳನ್ನು ಧರಿಸಿಕೊಂಡು, ಅತ್ತಿತ್ತ ತಿರುಗುತ್ತ, ಶ್ರೀಕೃಷ್ಣನ ಬಾಲ್ಯವನ್ನು ವಿವರಿಸುವ ಒಂದು

ಹಾಡನ್ನು ಹಾಡತೊಡಗಿದಳು. ಅವಳ ಕಂಠ ಸ್ವರವು ಬಹಳ ಮನೋಹರವಾಗಿದ್ದಿತು.

ಪಾಷಂಡನು ಅವಳನ್ನು ನೋಡಿ, "ಶ್ರೀಕೃಷ್ಣನ ಮೇಲೆ ಹಾಡಬೇಡ, ಶಿವನನ್ನು ಕೀರ್ತಿಸುವ ಯಾವುದಾದರೂ ಹಾಡು ಹಾಡು. ನನ್ನ ಹೆಂಡತಿಗೆ ಶಿವನ ಮೇಲೆ ಬಹಳ ಇಷ್ಟ. ಅವಳ ಇಷ್ಟವೇ ನನ್ನ ಇಷ್ಟ ಕೂಡಾ" ಎಂದನು.

ಅದನ್ನು ಕೇಳಿ ಮೋಹಿನಿಯ ಮುಖ ಸಣ್ಣದಾಯಿತು.

ಆಮೇಲೆ ಇನ್ನೊಂದು ದಿನ ಅವಳು ನಾಟ್ಯ ಮಾಡುವುದನ್ನು ನೋಡಿ ಪಾಷಂಡನು ತಡೆದು, "ಹೀಗೆಲ್ಲಾ ನಾಟ್ಯ ಬೇಡ. ನನ್ನ ಹೆಂಡತಿ ಹೇಳಿದಾಗ ಮಾತ್ರ ನಾಟ್ಯಮಾಡು. ಆಗ ಅವಳಿಗೆ ಸಂತೋಷ ವಾಗುತ್ತದೆ. ಇಲ್ಲದಿದ್ದರೆ ಅವಳಿಗೆ ಸಿಟ್ಟು ಬಂದೀತು. ನನಗೂ ಕಷ್ಟ" ಎಂದನು ತುಸು ಕೋಪದಿಂದ.

ಒಂದು ದಿನ ಮೋಹಿನಿ ಪಾಷಂಡನೊಂದಿಗೆ, "ನೀನು ಸಾಮಾನ್ಯನಾದ ಕಳ್ಳನೇನೂ ಅಲ್ಲವೆಂದು, ರಾಜಕುಮಾರನನ್ನು ಪ್ರಿಾರಿಸುವ ಮಹಾ ಪ್ರತಾಪಿ ಎಂದು ನಿನ್ನ ಸೇವಕರು ಹೇಳುತ್ತಾರೆ. ಅಂತಹ ನಿನ್ನ ಪ್ರತಾಪ ಎಂತಹುದೆಂದು ನೋಡಬೇಕೆಂದಿದೆ" ಎಂದಳು.

"ಹಾಗಾದರೆ ಅಡವಿಯೊಳಗೆ ಹೋಗಬೇಕು. ನಿನ್ನನ್ನು ಕರೆದುಕೊಂಡು ಹೋಗಬೇಕಾದರೆ ನನ್ನ ಹೆಂಡತಿಯ ಅನುಮತಿ ಪಡೆಯಬೇಕು. ಅದಕ್ಕೆ ನೀನು ಅವಳನ್ನು ಮೆಚ್ಚಿಸಿ ಒಪ್ಪಿಸು" ಎಂದನು ಪಾಷಂಡ.

ಈ ರೀತಿಗಳು ಮೋಹಿನಿಗೆ ಅಭ್ಯಾಸವಾಗಿ ಹೋದುದರಿಂದ ಅವಳಿಗೇನೂ ಕೋಪ ಬರಲಿಲ್ಲ. ಅವಳು ಪಾತಕಿಯ ಬಳಿಗೆ ಹೋಗಿ, ತನ್ನ ಅಭಿಲಾಷೆಯನ್ನು ಅವಳೊಂದಿಗೆ ಹೇಳಿ, "ಅಮ್ಮಾ, ನನ್ನ ಸೌಂದರ್ಯದಿಂದ ನಿಮ್ಮ ಗಂಡನನ್ನು ವಶಪಡಿಸಿ



ಕೊಳ್ಳುವೆನೇನೋ ಎಂಬ ಭಯ ನಿಮಗಿದ್ದರೆ ಬೇಡ ಬಿಡಿ, ಆ ಭಯವಿಲ್ಲದಿದ್ದರೆ ದಯಮಾಡಿ ಅನುಮತಿ ಕೊಡಿ" ಎಂದಳು.

ಪಾತಕಿ ನಕ್ಕು, "ನಮ್ಮಿಬ್ಬರೊಳಗಿನ ಪ್ರೇಮ ಎಂತಹುದೆಂದು ನಿನಗೆ ಅರ್ಥವಾಗದು. ಹಾಗೆಯೇ ಹೋಗಿ ಬಾರಮ್ಮ" ಎಂದಳು.

ಮೋಹಿನಿ ಪಾಷಂಡನೊಂದಿಗೆ ಅಡವಿಗೆ ಹೋದಳು. ಅಲ್ಲಿ ಅವನು ತನ್ನ ವಿದ್ಯೆಯ ಪ್ರತಾಪಗಳನ್ನೆಲ್ಲಾ ಅವಳ ಮುಂದೆ ಪ್ರದರ್ಶನ ಮಾಡಿದನು. ಅವನ ಜಾಣತನಗಳನ್ನು ನೋಡಿ ಮೋಹಿನಿಗೆ ಅತ್ಯಾಶ್ಚರ್ಯವಾಯಿತು.

ಕಾಡಿನಲ್ಲಿ ಒಂದು ಕಡೆ ಒಂದು ನಾಗರಹಾವು ಹೆಡೆಬಿಚ್ಚಿ ಕಡಿಯಲು ಬಂದಿತು. ಪಾಷಂಡನು ಅದರ ಬಾಲ ಹಿಡಿದೆತ್ತಿ ಬೀಸಿ ದೂರ ಒಗೆದನು. ಬಿಲ್ಲಿನಿಂದ ಬಾಣ ಪ್ರಯೋಗಮಾಡಿ ಓಡುವ ಜಿಂಕೆಯ ಸುತ್ತಲೂ ನೆಲದಲ್ಲಿ ಬಾಣ ಚುಚ್ಚಿ



ಕೊಳ್ಳುವಂತೆ ಮಾಡಿ, ಆ ಶರಪಂಜರದಲ್ಲಿ ಜಿಂಕೆಯನ್ನು ಕದಲದಂತೆ ನಿಲ್ಲಿಸಿದನು.

"ಕ್ರೂರಪ್ರಾಣಿಗಳನ್ನಾದರೂ, ಸಾಧು ಪ್ರಾಣಿಗಳನ್ನಾದರೂ ಅವುಗಳ ಶರೀರಕ್ಕೆ ಗಾಯವೇ ಆಗದಂತೆ ಹೀಗೆಯೇ ಜೀವದೊಂದಿಗೆ ಹಿಡಿದು ಬಂಧಿಸಬಲ್ಲೆನು" ಎಂದನು ಪಾಷಂಡ.

ಮೋಹಿನಿ ಆಶ್ಚರ್ಯದಿಂದ, "ನಿಜಕ್ಕೂ ನೀನು ಯಾವ ದೇಶಕ್ಕೋ ರಾಜನಾಗಬೇಕಾದವನು. ನಿನ್ನ ಪ್ರತಾಪಗಳು ಅಮೋಘವೇ ನಿಜ" ಎಂದಳು.

"ನೀನೇನೋ ಮೆಚ್ಚಿಕೊಂಡಿರುವಿ. ಆದರೆ ನನಗೇನೂ ತೃಪ್ತಿ ಇಲ್ಲ. ಏಕೆಂದರೆ ನನ್ನ ಹೆಂಡತಿ ಇನ್ನೂ ನನ್ನ ಪ್ರತಾಪವನ್ನು ಮೆಚ್ಚುವುದಿಲ್ಲ. ಭೂಮಿಯೊಳಗೆ ಬಾಣ ಪ್ರಯೋಗ ಮಾಡಿ, ಅರ್ಜುನನ ಹಾಗೆ ಗಂಗೆಯನ್ನು ಮೇಲೆ ತರಲಿಕ್ಕೆ ನನ್ನಿಂದಾಗದೆಂದು ಅವಳು ನನಗೆ ಪರಿಹಾಸ್ಯ ಮಾಡುತ್ತಾಳೆ" ಎಂದನು ಪಾಷಂಡ ಚಿಂತೆಯಿಂದ.

ಅವನಿಗೆ ಹೆಂಡತಿಯ ಮೇಲಿರುವ ಗೌರವಕ್ಕೆ ಮೋಹಿನಿ ಆಶ್ಚರ್ಯಪಡುತ್ತ, "ನಾನು ನಿನ್ನ ವಿದ್ಯೆಗಳನ್ನು ಕಣ್ಣಾರೆ ನೋಡಿದೆನು. ನೀನು ನನ್ನ ವಿದ್ಯೆಗಳನ್ನು ನೋಡಲಾರೆಯಾ ?" ಎಂದು ಕೇಳಿದಳು.

"ನನ್ನ ಹೆಂಡತಿಯೂ ಪಕ್ಕದಲ್ಲಿರುವಾಗ ನಿನ್ನ ವಿದ್ಯೆಗಳನ್ನು ನೋಡುತ್ತೇನೆ" ಎಂದನು ಪಾಷಂಡ.

ಆ ಮಾತಿನಿಂದ ಅವಳಿಗೆ ತುಂಬಾ ಸಿಟ್ಟು ಬಂದರೂ ನುಂಗಿಕೊಂಡು, ಬಹಳ ಶಾಂತತೆಯಿಂದಲೇ "ನಾನೊಂದು ಮಾತು ಹೇಳುತ್ತೇನೆ. ನಾನು ಅತಿಲೋಕ ಸೌಂದರ್ಯವತಿ ಎಂಬ ನಿಜವು ನನಗೇ ಗೊತ್ತಿದೆ ಎಂದಲ್ಲ, ಎಷ್ಟೋ ರಾಜಕುಮಾರರಿಗೆ ಕೂಡಾ ಗೊತ್ತಿದೆ. ವಿವಾಹ ಮಾಡಿಕೊಳ್ಳಬೇಕೆಂದು ಬಂದ ಅಂಥವರನ್ನೆಲ್ಲಾ ನಿರಾಕರಿಸಿದವಳು ನಾನು. ಹೆಂಡತಿಯನ್ನು ಕುರಿತು ಗಂಡನ ಇದಿರಿನಲ್ಲಿ ಹೇಳಬಾರದಾದರೂ ಹೇಳಲೇಬೇಕಾದ ಮಾತಾದ್ದರಿಂದ ಹೇಳುತ್ತೇನೆ. ನಿನ್ನ ಹೆಂಡತಿ ಪರಮ ಕುರೂಪಿ ತಾನೇ ? ಆದರೂ ನೀನು ಅವಳ ಮೇಲೆ ಇಷ್ಟೊಂದು ಆಕರ್ಷಿತನಾಗಿ, ಸೌಂದರ್ಯವತಿಯಾದ ನನ್ನ ಮೇಲೆ ನಿರ್ಲಕ್ಷ್ಯ ತೋರಿಸುವುದು ನನಗೇನೋ ಬಹಳ ಆಶ್ಚರ್ಯವಾಗಿ ಕಾಣುತ್ತದೆ !" ಎಂದಳು.

ಪಾಷಂಡನು ಮೋಹಿನಿಯನ್ನು ಒಂದು ಸಾರಿ ಪರೀಕ್ಷಿಸಿ ನೋಡಿ, ಕಿರುನಗು ತೋರಿಸುತ್ತ, "ನಾನು ಬಾಹ್ಯ ಸೌಂದರ್ಯಕ್ಕಿಂತಲೂ ಅಂತಃಸೌಂದರ್ಯಕ್ಕೇ ಹೆಚ್ಚು ಬೆಲೆ ಕೊಡುತ್ತೇನೆ. ಈ ಕಾರಣದಿಂದಲೇ ನನಗೆ ನನ್ನ ಹೆಂಡತಿ ಪಾತಕಿಯೆಂದರೆ ಅಷ್ಟೊಂದು ಆದರ, ಅಷ್ಟೊಂದು ಆಪ್ಯಾಯತೆ !" ಎಂದನು.

ಗುಹೆಯೊಳಗೆ ಹಿಂದಿರುಗಿ ಬಂದ ಮೇಲೆ ಮೋಹಿನಿ ದೀಪಕನೊಂದಿಗೆ ನಡೆದ ಸಂಗತಿಯನ್ನೆಲ್ಲಾ ಹೇಳಿ, "ಇನ್ನು ಇಲ್ಲಿಂದ ಹೊರಬೀಳಲಿಕ್ಕೆ ಏನು ಮಾಡಬೇಕೋ ನನಗೊಂದೂ ತೋರುವುದಿಲ್ಲ" ಎಂದಳು ನಿರಾಶೆಯಿಂದ.

"ಇನ್ನು ಒಂದೇ ದಾರಿ. ನಮ್ಮ ನಾಯಕನ ಹೆಂಡತಿಯನ್ನು ಮೆಚ್ಚಿಸಿಬಿಡು. ಈ ಗುಹೆಯಲ್ಲಿ ಅವಳ ಹೊರತು ಬೇರೆ ಯಾರೂ ನಿನ್ನನ್ನು ರಕ್ಷಿಸಲಾರರು" ಎಂದನು ದೀಪಕ.

ಅದಕ್ಕೊಂದು ಉಪಾಯವನ್ನು ಕೂಡಾ ಅವನೇ ಹೇಳಿದನು.

ಮರುದಿನ ವೃದ್ಧನಾದ ದೀಪಕನು ಪಾತಕಿ ನಡೆಯುವ ದಾರಿಯಲ್ಲಿ ಬಾಳೇಹಣ್ಣಿನ ಸಿಪ್ಪೆಗಳನ್ನು ಹಾಕಿಟ್ಟನು. ಸ್ವಲ್ಪಹೊತ್ತಿಗೆ ಪಾತಕಿ ಅಲ್ಲಿ ನಡೆಯುತ್ತ ಥಕ್ಕನೆ ಕಾಲುಜಾರಿ ಬೀಳಲು ಹೋದಾಗ, ಮೋಹಿನಿ ಹಾರಿಬಂದು ಅವಳು ಬೀಳದಂತೆ ಹಿಡಿದಳು.

ಪಾತಕಿ ಬಹಳ ಸಂತೋಷಪಟ್ಟು "ಆಹ! ನೀನು ರಾಜಕುಮಾರಿಯಾಗಿದ್ದರೂ ನನ್ನ ಸೇವಕರಿಗಿಂತಲೂ ಮಿಗಿಲಾಗಿ ನನ್ನ ಸೇವೆ ಮಾಡುವಿ. ನಾನು ನಿನ್ನನ್ನು ಇಲ್ಲಿಗೆ ತರಿಸಿದ ನಿಜವಾದ ಕಾರಣ ಬೇರೆಯೇ ಇದೆ. ನಿನ್ನನ್ನು ನಾನು ಸ್ವತಂತ್ರಳನ್ನಾಗಿ ಮಾಡುತ್ತೇನೆ. ನೀನು ನನ್ನ ಗಂಡನಿಗೆ ಈ ಬೆಟ್ಟದ ಗುಹೆಯ ಬದುಕನ್ನು ಹೋಗಲಾಡಿಸಬೇಕು. ನಾವೆಲ್ಲರೂ ಹಾಯಾಗಿ ಯಾವ ನಗರದಲ್ಲಿಯೋ ಜೀವಿಸಿಕೊಂಡಿರುವಂತಾಗಬೇಕು. ಅದಕ್ಕೆ ತಕ್ಕ ಹಾಗೆ ಏರ್ಪಡಿಸಲು ರಾಜಕುಮಾರಿಯಾದ ನಿನ್ನಿಂದ ಸಾಧ್ಯವೆ?" ಎಂದು ಕೇಳಿದಳು.

ತಾನು ಮತ್ತೆ ರಾಜಧಾನಿಯನ್ನು ಸೇರಲು ಇದು ಒಳ್ಳೆಯ ಸಂದರ್ಭವೆಂದುಕೊಂಡು ಮೋಹಿನಿ ಹಾಗೆ ಮಾಡಲು ಒಪ್ಪಿದಳು.

ಪಾತಕಿ ಗಂಡನನ್ನು ಹತ್ತಿರ ಕರೆದು, "ಇವಳನ್ನು ನೋಡಿ ನನಗೆ ಪಾಪ ಕಾಣಿಸುತ್ತದೆ. ಇವಳನ್ನು ಒಯ್ದು ಜಾಗರೂಕತೆಯಿಂದ ರಾಜನ ಹತ್ತಿರ ಬಿಟ್ಟುಬಿಡಬೇಕು. ಇವಳು ತನ್ನ ತಂದೆಯೊಂದಿಗೆ ಹೇಳಿ ನಿಮ್ಮ ಅಪರಾಧಗಳನ್ನೆಲ್ಲಾ ಕ್ಷಮಿಸುವಂತೆ ಮಾಡುತ್ತಾಳೆ" ಎಂದಳು.



ಪಾಷಂಡನು ಮೋಹಿನಿಯನ್ನು ಕರೆದುಕೊಂಡು ಕುದುರೆಯ ಮೇಲೆ ಮಹಾರಾಜನ ಅರಮನೆಯನ್ನು ಸೇರಿದನು. ಮೋಹಿನಿಯ ಆಜ್ಞಾಪನೆಯಂತೆ ಕಾವಲು ಭಟರಾರೂ ಪಾಷಂಡನನ್ನು ಹಿಡಿಯುವ ಪ್ರಯತ್ನ ಮಾಡಲಿಲ್ಲ.

ಪಾಷಂಡನು ರಾಜನ ಮುಂದೆ ಮೋಹಿನಿಯನ್ನು ಕಳಿಸಿ, "ಇಗೋ ನಿಮ್ಮ ಮಗಳು! ಒಂದು ಪ್ರಯೋಜನಕ್ಕಾಗಿ ಸ್ವಲ್ಪಕಾಲ ಇವಳನ್ನು ಒಯ್ದು ನನ್ನ ಹತ್ತಿರ ಇಟ್ಟುಕೊಳ್ಳಬೇಕಾಗಿ ಬಂತು. ಅದೇನೆಂಬುದನ್ನೆಲ್ಲ ತಾವು ಇವಳನ್ನೇ ಕೇಳಿ ತಿಳಿದುಕೊಳ್ಳಬಹುದು" ಎಂದನು.

ಮೋಹಿನಿ ಕೂಡಲೇ ತಂದೆಯೊಂದಿಗೆ, "ಅಪ್ಪಾ, ನನ್ನ ಒಂದೇ ಒಂದು ಅಪೇಕ್ಷೆಯನ್ನು ನೆರವೇರಿಸಬೇಕು. ಏನೋ ಒಂದು ವಿಧವಾಗಿ ಈ ಯುವಕ ನನ್ನು ಇಲ್ಲಿಯೇ ನಿಲ್ಲಿಸಿ ಇವನೊಂದಿಗೆ ನನ್ನ ವಿವಾಹವನ್ನು ನಡೆಸಿಬಿಡಿರಿ. ಇವನು ಯಾವ ಪ್ರಯೋಜನ

ಕ್ಕಾಗಿ ನನ್ನನ್ನು ಅಪಹರಿಸಿಕೊಂಡು ಹೋದನೋ ಅದು ಈಗ ಮುಖ್ಯವಲ್ಲ" ಎಂದಳು.

ಆ ಮಾತುಗಳನ್ನು ಕೇಳಿದ ಕೂಡಲೇ ಪಾಷಂಡನು ಅಲ್ಲಿಂದ ಓಡಿಹೋದನು. ಆದರೆ ಅನೇಕ ಮಂದಿ ರಾಜಭಟರು ಸುತ್ತಲೂ ಬಂದು ಮುತ್ತಿಕೊಂಡುದರಿಂದ ಅದು ಸಾಧ್ಯವಾಗಲಿಲ್ಲ.

"ಅಬ್ಬ! ಇಷ್ಟು ಕಾಲದ ಮೇಲೆ ನೀನು ವಿವಾಹಕ್ಕೆ ಒಪ್ಪಿರುವಿ. ಅಷ್ಟು ಸಾಕು!" ಎಂದು ಹೇಳಿ ರಾಜನು ಮೋಹಿನಿಯನ್ನು ಪಾಷಂಡನೊಂದಿಗೆ ಬಲವಂತವಾಗಿ ವಿವಾಹ ನಡೆಸಿಬಿಟ್ಟನು.

ವಿವಾಹವಾದ ಮೇಲೆ ಮೋಹಿನಿ ಪಾಷಂಡನೊಂದಿಗೆ, "ನನ್ನನ್ನು ಕ್ಷಮಿಸಿಬಿಡಿರಿ. ನೀವು ಕಳ್ಳರ ನಾಯಕರು. ಅದರ ಮೇಲೆ ವಿವಾಹವಾದವರು. ಆದರೂ ನಾನು ನಿಮ್ಮನ್ನು ಬಲವಂತವಾಗಿ ವಿವಾಹ ಮಾಡಿಕೊಂಡಿದ್ದೇನೆ. ನೀವು ನನಗೆ ಗಂಡನಾದುದು ನನಗೆ ಎಷ್ಟೋ ತೃಪ್ತಿಯಾಗಿದೆ. ನಿಮಗೆ ಇಷ್ಟವಿಲ್ಲದಿದ್ದರೆ ಈ ಕ್ಷಣವೇ ನೀವು ಹೊರಟುಹೋಗಬಹುದು. ಹೋದರೂ ಮತ್ತೆ ನೀವು ತಿರುಗಿ ಬರುವಿರಿ ಎಂಬ ನಂಬುಗೆ ನನಗಿದೆ. ಇದಿರು ನೋಡುತ್ತಾ ಇರುತ್ತೇನೆ" ಎಂದು ಅವನ ಕಾಲಿನ ಮೇಲೆ ಅಡ್ಡಬಿದ್ದಳು. ಪಾಷಂಡನು ನಗುವನ್ನು ಅರಳಿಸಿಕೊಂಡು ಅವಳನ್ನು ಎಬ್ಬಿಸಿ, "ನಾನು ಇಲ್ಲಿಂದ ಹೋಗುವುದಾದರೆ ನಿನ್ನನ್ನು ಕರೆದುಕೊಂಡೇ ಹೋಗುತ್ತೇನೆ. ನಾನು ನಿನ್ನನ್ನು ನಿರ್ಲಕ್ಷ್ಯ ಮಾಡಿದೆನೆಂಬ ಭ್ರಮೆಯನ್ನು ಉಂಟುಮಾಡಲಿಕ್ಕಾಗಿಯೇ ನಿನ್ನ ತಂದೆಯ ಸಹಾಯದಿಂದ ಈ ನಾಟಕವೆಲ್ಲಾ ಆಡಿದ್ದೇನೆ. ಆ ಗುಹೆಯಲ್ಲಿರುವವರೆಲ್ಲರೂ ನಿನ್ನ ತಂದೆ ಕಳುಹಿಸಿದವರೇ. ನನ್ನ ಹೆಸರು ಶೂರಸೇನನೆಂದು. ಪ್ರತಾಪ ದೇಶದ ರಾಜಕುಮಾರ ನಾನು. ನಿನಗೆ ದೊಡ್ಡ ಸುಂದರಿ ಎಂದು ಗರ್ವವಿದೆಯಷ್ಟೆ? ನಿರ್ಲಕ್ಷ್ಯವೇ ನಿನ್ನನ್ನು ವಶಪಡಿಸಿಕೊಳ್ಳಲು ತಕ್ಕ ಮದ್ದು ಎಂದು ನಾನು ತಿಳಿದೆನು. ಈಗ ನಿಜ ಸಂಗತಿ ಹೇಳಿದೆನು. ಈಗ ಹೇಳು, ನೀನು ನನ್ನ ರಾಜ್ಯಕ್ಕೆ ಬರುವಿಯೋ ಇಲ್ಲವೊ?" ಎಂದನು.

ಇದನ್ನೆಲ್ಲ ಕೇಳಿ ಮೋಹಿನಿ ದಿಗ್ಭ್ರಾಂತಳಾದಳು. "ಒಬ್ಬರು ಲಕ್ಷ್ಯ ಕೊಟ್ಟರೇನೇ ಯಾವ ಚೆಂದಕ್ಕಾದರೂ ಬೆಲೆ ಬರುತ್ತದೆ. ಮನುಷ್ಯನಿಗೆ ನಿಜವಾದ ಸೌಂದರ್ಯವು ಒಳ್ಳೆಯತನವೇ, ವಿನಯವೇ ಎಂಬುದನ್ನು ನಿಮ್ಮೊಂದಿಗೆ ಗುಹೆಯಲ್ಲಿರುವಾಗ ನಾನು ತಿಳಿದುಕೊಂಡೆನು. ಇನ್ನು ನಿಮ್ಮ ಹೆಂಡತಿಯಾಗಿ ನಿಮ್ಮ ಸೇವೆ ಮಾಡುತ್ತ ಇನ್ನೂ ನನ್ನನ್ನು ತಿದ್ದಿಕೊಳ್ಳುತ್ತೇನೆ" ಎಂದಳು ಮೋಹಿನಿ.

ಆಮೇಲೆ ಆ ದಂಪತಿಗಳು ಚಿರಕಾಲ ಸಂತೋಷದಿಂದ ಸೌಖ್ಯವಾಗಿದ್ದರು.





# ಭೂತದ ಬೆಟ್ಟ

ಒಂದಾನೊಂದು ಕಾಲದಲ್ಲಿ ಕೊಂಕಣ ತೀರದ ಬೆಟ್ಟಗಳಲ್ಲಿ ಒಂದು ಬೆಟ್ಟಕ್ಕೆ 'ಭೂತದ ಬೆಟ್ಟ' ಎಂದು ಹೆಸರಿತ್ತು. ಸುತ್ತಮುತ್ತಲಿನ ಗುಡ್ಡ ಬೆಟ್ಟಗಳ ಇಳಿಜಾರಿನಲ್ಲಿ ದನಗಳನ್ನು ಮೇಯಿಸುವವ ರೆಲ್ಲರೂ ತಮ್ಮ ದನಗಳನ್ನು ಆ ಬೆಟ್ಟದ ಮೇಲೆ ಹೋಗಲು ಬಿಡುತ್ತಿದ್ದಿಲ್ಲ. ಅಪ್ಪಿತಪ್ಪಿ ಯಾವ ದನವೋ ಆ ಬೆಟ್ಟದ ಮೇಲೆ ಹೋಗಿಬಿಟ್ಟರೆ, ಅದನ್ನು ಹಿಂದೆ ಕರೆದುಕೊಂಡು ಬರಲು ಯಾವ ಕಾವಲುಗಾರರೂ ಪ್ರಯತ್ನ ಮಾಡುವುದಿಲ್ಲ. ಏಕೆಂದರೆ ದನದ ಮೇಲಿನ ಆಶೆಯಿಂದ ಆ ಬೆಟ್ಟದ ಮೇಲೆ ಹೋದವರು ಮತ್ತೆ ಹಿಂದಿರುಗಿ ಬಂದುದೇ ಇಲ್ಲ. ಇದು ಎಲ್ಲರಿಗೂ ಗೊತ್ತು. ಆದುದರಿಂದ ಪಶುಗಳ ನಷ್ಟವನ್ನು ಹೊತ್ತು ಸುಮ್ಮನಿರುವರು.

ಆದರೆ ಭೂತದ ಬೆಟ್ಟದ ಮೇಲೆ ಒಂದು ದನಗಳ ಮಂದೆಯೇ ಇದ್ದಿತು. ಬೆಳಗಾದ ಮೇಲೆ ಅವು ಕೊಟ್ಟಿಗೆಗಳಿಂದ ಹೊರಗೆ ಬಂದು, ಗುಡ್ಡದ ಮೇಲ್ಭಾಗದಲ್ಲಿ ತಿರುಗಾಡಿ ಮೇವು ಮೇದು, ಮತ್ತೆ ಸಾಯಂಕಾಲದ ಹೊತ್ತಿನಲ್ಲಿ ಯಾರೋ ತಮ್ಮನ್ನು ಅಟ್ಟಿಸುವಂತೆ ಅಲ್ಲಿಯ ಕೊಟ್ಟಿಗೆಗಳಿಗೆ ಹಿಂದಿರುಗಿ ಬರುತ್ತಿದ್ದುವು. ಆದರೆ ದನಗಳು ಮಾತ್ರ ಕಾಣುತ್ತ ವೆಯೇ ಹೊರತು ಅವುಗಳ ಹಿಂದೆ ಯಾರೂ ಕಾಣಿಸುತ್ತಿರಲಿಲ್ಲ. ಅವುಗಳ ಪೋಷಣೆ ಯಾರು ಮಾಡುತ್ತಾರೋ, ಯಾರು ಹಾಲು ಹಿಂಡುತ್ತಾರೋ ಹಿಂಡಿದ ಹಾಲು ಏನಾಗುತ್ತದೋ, ಎಲ್ಲಿಗೆ ಹೋಗುತ್ತದೋ ಎಂಬುದೊಂದೂ ಹೊರಗಿನ ಪ್ರಪಂಚಕ್ಕೆ ತಿಳಿಯದು.

ಆ ಬೆಟ್ಟದ ಮೇಲೆ ದನಗಳ ಕೊಟ್ಟಿಗೆಗಳಿಗೆ ಸಮೀಪದಲ್ಲಿ ಒಬ್ಬ ದನ ಕಾಯುವವನ ಗುಡಿಸಲು ಕೂಡಾ ಇತ್ತು. ದಿನಾ ಸಾಯಂಕಾಲದ ಹೊತ್ತಿನಲ್ಲಿ ಒಲೆ ಹೊತ್ತಿಸಿದಂತೆ ಆ ಗುಡಿಸಲಿನ ಮಾಡಿನಿಂದ ಹೊಗೆ ಏಳುವುದು ಕಾಣುತ್ತಿತ್ತು. ಆದರೂ ಭೂತದ ಬೆಟ್ಟದಲ್ಲಿ ನರಮಾನವನೊಬ್ಬನಿರುವುದನ್ನು ಮಾತ್ರ ನೋಡಿದವರಿಲ್ಲ. ಇದ್ದರೆ ಅವನು ಮಾನವ ನಾಗಿರಲಿಕ್ಕೆ ಸಾಧ್ಯವೂ ಇಲ್ಲ. ಅವನು ದೇವ ಜಾತಿಯವನಾದುದರಿಂದಲೇ ಅದೃಶ್ಯನಾಗಿರುತ್ತಾ ನೆಂದು ಎಲ್ಲರ ನಂಬುಗೆ.

ಆ ಬೆಟ್ಟದ ಮೇಲೆ ಇರುವವನು ದೇವ ಜಾತಿಯವರಲ್ಲವೆಂದೂ, ಭೂತಗಳಿವೆಯೆಂದೂ,



ಸಂದರ್ಭ ಸಿಕ್ಕಿದಾಗಲೆಲ್ಲ ಸುತ್ತುಮುತ್ತಲಿನ ಗುಡ್ಡಗಳಲ್ಲಿರುವ ದನಗಳನ್ನು ಅಪಹರಿಸಿಕೊಂಡು ಹೋಗುತ್ತವೆಂದೂ, ಅವುಗಳನ್ನು ಹುಡುಕಿಕೊಂಡು ಆ ಬೆಟ್ಟದ ಮೇಲೆ ಹೋದವರನ್ನು ಅವು ಕೊಂದು ಬಿಡುತ್ತವೆಂದೂ ಜನರು ಹೇಳುತ್ತಿದ್ದರು.

ಆ ಭಯದಿಂದ ಭೂತಗಳಿರುವ ಆ ಬೆಟ್ಟದ ಮೇಲೆ ಯಾರೂ ಹೋಗುವುದಿಲ್ಲ. ಹೋಗುವ ಸಾಹಸ ಮಾಡುವುದೂ ಇಲ್ಲ. ಯಾರಾದರೂ ಸಾಹಸಕ್ಕೆ ಟೊಂಕ ಕಟ್ಟಿದರೆ, ತಲೆಗಟ್ಟಿಯಿದೆಯೆಂದು ಬಂಡೆಗೆ ಹೊಡೆದುಕೊಳ್ಳಬಾರದೆಂದು ಬುದ್ಧಿ ಹೇಳಿ ತಡೆದು ನಿಲ್ಲಿಸುತ್ತಿದ್ದರು.

ಹೀಗಿರುವಾಗ ಆ ಪ್ರಾಂತಕ್ಕೆ ಸತ್ಯಪಾಲನೆಂಬ ಒಬ್ಬ ಹೊಸಬನು ದನ ಮೇಯಿಸುವ ಕೆಲಸಗಾರನಾಗಿ ಬಂದನು. ಅವನು ಭೂತದ ಬೆಟ್ಟದಲ್ಲಿ ದಿನಾ ನಡೆಯುವುದನ್ನೆಲ್ಲಾ ನೋಡುತ್ತಿದ್ದನು. ಭೂತಗಳನ್ನು ಕುರಿತು ಜನರು ಹೇಳುವುದನ್ನೆಲ್ಲಾ ಕೇಳಿದನು. ಸತ್ಯಪಾಲನು ಯುವಕನೂ, ಸಾಹಸ ಗುಣದವನೂ ಆವುದರಿಂದ, ಅವನಿಗೆ ಆ ಭೂತದ ಬೆಟ್ಟದ ಮೇಲೆ ಹೋಗಿ ಅಲ್ಲಿ ನಿಜಕ್ಕೂ ಏನು ನಡೆಯುವುದೆಂಬುದನ್ನು ತಿಳಿಯಲೇಬೇಕೆಂದು ಕುತೂಹಲವೆದ್ದಿತು. ಈ ಕತೂಹಲವು ದಿನದಿಂದ ದಿನಕ್ಕೆ ಹೆಚ್ಚುತ್ತಾ ಹೋಯಿತು.

ಉಳಿದ ದನಗಾಹಿಗಳು ಅವನೊಂದಿಗೆ ಅಂತಹ ಸಾಹಸಕ್ಕೆ ಹೋಗಲೇಬೇಡವೆಂದು ಒತ್ತಿ ಹೇಳಿದರು. ಆದರೆ ಅವನು ಕೇಳಲಿಲ್ಲ. "ಒಂದು ವೇಳೆ ನೀನು ಬೆಟ್ಟದ ಮೇಲೆ ಹೋದರೂ ಅಲ್ಲಿರುವ ಗುಡಿಸಲಿಗೆ ಮಾತ್ರ ಹೋಗಬೇಡ. ಅದರೊಳಗೆ ಹೋಗಿ ಮತ್ತೆ ಹೊರಗೆ ಬಂದವರು ಯಾರೂ ಇಲ್ಲ. ಹೇಳಿದ್ದು ಕೇಳದೆ ಹಟಹಿಡಿದು ಹೋದರೆ ನಿನ್ನ ಗತಿ ಮತ್ತೆ ಅಷ್ಟೇ!" ಎಂದು ಮಿತ್ರರು ಸತ್ಯಪಾಲನಿಗೆ ಎಚ್ಚರಿಕೆ ಹೇಳಿದರು. ಆದರೆ ಸತ್ಯಪಾಲನು ಸ್ವಲ್ಪವೂ ಹೆದರಲಿಲ್ಲ. ಅವನು ಧೈರ್ಯದಿಂದ ಭೂತದ ಬೆಟ್ಟದ ಮೇಲಕ್ಕೆ ಹೋಗಿ ಅಲ್ಲಿರುವ ಗುಡಿಸಲಿನ ಕಡೆಗೆ ನಡೆದನು. ಅದು ಸಾಧಾರಣವಾಗಿರುವ ಇತರ ಬೆಟ್ಟದ ಹಾಗೇ ಇದ್ದಿತು. ಎಲ್ಲಿಯೂ ಭಯಂಕರವಾದ ದೃಶ್ಯಗಳೇನೂ ಇರಲಿಲ್ಲ. ಎಲ್ಲವೂ ನಿಃಶಬ್ದವಾಗಿಯೇ ಕಂಡಿತು. ಅವನು ಗುಡಿಸಲಿನ ಹತ್ತಿರ ಹೋಗಿ ಒಳಗೆ ಬಗ್ಗಿ ನೋಡಿದನು. ಮನುಷ್ಯರು ವಾಸ ಮಾಡುವ ಗುಡಿಸಲಿನ ಹಾಗೆಯೇ ಒಳಭಾಗ ವಿದ್ದಿತು. "ಯಾರಿದ್ದೀರಿ ಒಳಗೆ?" ಎಂದು ಸತ್ಯಪಾಲನು ಎರಡುಸಾರಿ ಕೂಗಿದರೂ ಒಳಗಿನಿಂದ ಪ್ರತ್ಯುತ್ತರವೇನೂ ಬರಲಿಲ್ಲ. ಯಾವ ಶಬ್ದ ಕೂಡಾ ಹೊರಡಲಿಲ್ಲ.

ಯಾವ ಸಂಕೋಚವೂ ಇಲ್ಲದೆ ಸತ್ಯಪಾಲನು ಗುಡಿಸಲಿನೊಳಗೆ ಹೊಕ್ಕನು. ಒಂದು ಬದಿಯಲ್ಲಿ ಪಾತ್ರೆಗಳಲ್ಲಿ ಭೋಜನ ಪದಾರ್ಥಗಳು ಸಿದ್ಧ



ವಾಗಿದ್ದುವು. ಇನ್ನೊಂದು ಬದಿಯಲ್ಲಿ ಒಂದು ಮಂಚವಿದ್ದಿತು. ಮಂಚದ ಮೇಲೆ ಹಾಸಿಗೆ ಕೂಡಾ ಹಾಸಲಾಗಿದೆ. ಕೈ ಕಾಲು ತಲೆಗಳಿಗೆ ಮೆತ್ತಗಿನ ದಿಂಬುಗಳನ್ನೂ ಇರಿಸಲಾಗಿವೆ.

"ಇಲ್ಲಿ ಯಾರೋ ಮನುಷ್ಯರೇ ವಾಸಮಾಡುತ್ತಿದ್ದಾರೆ. ಈಗ ಎಲ್ಲಿಗೋ ಹೊರಗೆ ಹೋಗಿದ್ದಾರೆ. ಅವರು ತಿರುಗಿ ಬರುವವರೆಗೂ ವಿಶ್ರಾಂತಿ ತೆಗೆದುಕೊಂಡರಾಯಿತು" ಎಂದುಕೊಂಡು ಸತ್ಯಪಾಲನು ಮಂಚದ ಮೇಲೆ ಹಾಸಿಗೆಯಲ್ಲಿ ಮೈ ಚಾಚಿ ಮಲಗಿದನು.

ಅಷ್ಟರಲ್ಲಿ ಗುಡಿಸಲಿನ ಹೊರಗೆ ಶಬ್ದವಾಯಿತು. ಒಬ್ಬ ರಾಕ್ಷಸನಂತಹವನು ಗುಡಿಸಲಿನೊಳಗೆ ಬಂದನು. ಅವನು ಅತ್ತಿತ್ತ ನೋಡದೆ ನೇರಾಗಿ ಅಡಿಗೇ ಪಾತ್ರಗಳಿದ್ದಲ್ಲಿಗೆ ಹೋಗಿ, "ಆ ಮಂಚದಲ್ಲಿ ಮಲಗಿರುವವನಿಗೆ ಕೂಡಾ ಅಡಿಗೆಯಾಯಿತೇನು?" ಎಂದು ಗಟ್ಟಿಯಾಗಿ ಕೂಗಿ ಕೇಳಿದನು. ಹೂಂ ಎಂಬ ಧ್ವನಿ ಕೇಳಿತು. ತರುವಾಯ ಆ ಭೂತಾಕಾರನು ಮಂಚದ ಕಡೆಗೆ ತಿರುಗಿ, "ಏಳು, ಊಟಕ್ಕೆ ಬಾ" ಎಂದು ಕರೆದನು.

ಮತ್ತೊಬ್ಬರಾಗುತ್ತಿದ್ದರೆ ಆ ಭೂತವನ್ನು ನೋಡಿದ ಕೂಡಲೇ ಅರ್ಧವಾದರೂ ಸಾಯುತ್ತಿದ್ದರು. ಆದರೆ ಸತ್ಯಪಾಲನು ಹೆದರಲಿಲ್ಲ. ಅವನು ಶಾಂತಸ್ವರದಲ್ಲಿ, "ಶ್ರಮಪಟ್ಟವನೇ ತಿಂಡಿ ತಿನ್ನಲು ಅರ್ಹನು. ನಾನೇನೂ ಶ್ರಮಪಡಲಿಲ್ಲವಲ್ಲಾ?" ಎಂದನು.

ಭೂತ ಅದಕ್ಕೇನೂ ಮಾರುತ್ತರ ಕೊಡಲಿಲ್ಲ. ಮಾತಾಡದೆ ಅಡಿಗೇ ಪಾತ್ರಗಳ ಮುಂದೆ ಕುಳಿತು ಕ್ಷಣಮಾತ್ರದಲ್ಲಿ ಎಲ್ಲವನ್ನೂ ತಿಂದು ಹಂಡೆ ಹಾಲನ್ನೂ ಕುಡಿದು ಖಾಲಿ ಮಾಡಿಬಿಟ್ಟನು. ತರುವಾಯ ಭೂತನು ಗೋಡೆಯ ಬದಿಯಲ್ಲಿದ್ದೊಂದು ಗುದ್ದಲಿಯನ್ನೂ, ಹಾರೆಯನ್ನೂ ತೆಗೆದುಕೊಂಡು ಸತ್ಯಪಾಲನಿಗೆ ಕೊಡುತ್ತ "ಇನ್ನು ಮಂಚದಿಂದ ಇಳಿದು ನನ್ನೊಂದಿಗೆ ನೆಲಮಾಳಿಗೆಗೆ ಬಾ" ಎಂದನು.

"ನೆಲಮಾಳಿಗೆಯಿಂದ ನಾನು ಏನನ್ನೂ ಮೇಲಕ್ಕೆ ತರಲಾರೆನು. ಆದುದರಿಂದ ನಾನು ನೆಲಮಾಳಿಗೆಗೆ ಏನನ್ನೂ ತೆಗೆದುಕೊಂಡು ಬರುವ ಅಗತ್ಯವಿಲ್ಲ" ಎಂದನು ಸತ್ಯಪಾಲ.

ಭೂತಾಕಾರನು ಗುದ್ದಲಿ ಹಾರೆಗಳನ್ನು ತಾನೇ ತೆಗೆದುಕೊಂಡು "ನನ್ನ ಹಿಂದೆ ಬಾ" ಎಂದನು.

"ಸರಿ, ಮುಂದೆ ನೀನು ನಡೆ. ನಾನು ಹಿಂದೆಯೇ ಬರುತ್ತೇನೆ" ಎಂದನು ಸತ್ಯಪಾಲ.

ಇಬ್ಬರೂ ಒಂದು ನೆಲಮಾಳಿಗೆಯೊಳಗೆ ಇಳಿದರು.

"ಇಲ್ಲಿ ಅಗೆ" ಎಂದನು ಭೂತದವನು.

"ಅಲ್ಲಿ ನಾನೇನೂ ಹುಗಿದಿಡಲಿಲ್ಲ" ಎಂದ ಸತ್ಯಪಾಲ. ಭೂತದವನೇ ಅಗೆದನು. ಆ ಹೊಂಡದಲ್ಲಿ ಒಂದು ಕೊಪ್ಪರಿಗೆ ಕಂಡುಬಂತು. "ಇದನ್ನು ಮೇಲಕ್ಕೆ ಎತ್ತು" ಎಂದನು ಭೂತ.

"ನಾನು ಅದನ್ನು ಕೆಳಗೆ ಇರಿಸಿದ್ದರೆ ತಾನೇ ಮೇಲಕ್ಕೆ ಎತ್ತುವುದು ?" ಎಂದನು ಸತ್ಯಪಾಲ.

ಭೂತನೇ ಅದನ್ನು ಮೇಲಕ್ಕೆ ಎತ್ತಿ ಮುಚ್ಚಳ ತೆರೆದನು. ಅದರ ತುಂಬಾ ಬಂಗಾರದ ನಾಣ್ಯಗಳಿದ್ದುವು. ಭೂತ ಅವುಗಳನ್ನು ನೆಲದ ಮೇಲಿಟ್ಟು, "ಇದರ ಮುಚ್ಚಳ ಕೆಳಗಿಡು" ಎಂದನು.

"ನಾನೇನೂ ಅದನ್ನು ಮುಚ್ಚಲಿಲ್ಲ. ಆದುದರಿಂದ ಅದನ್ನು ಕೆಳಗಿಡುವ ಅಗತ್ಯವೂ ನನಗಿಲ್ಲ" ಎಂದನು ಸತ್ಯಪಾಲ.

ಭೂತನೇ ಮುಚ್ಚಳ ಕೆಳಗಿಟ್ಟನು. ಅದರೊಳಗೆ ತುಂಬಾ ಬಂಗಾರದ ನಾಣ್ಯಗಳಿದ್ದುವು. ಭೂತನು ನಾಣ್ಯಗಳನ್ನು ನೆಲದ ಮೇಲೆ ಸುರಿದು ಮೂರು ರಾಶಿಗಳಾಗಿ ಮಾಡಿಟ್ಟು, "ಇವುಗಳಲ್ಲಿ ನಿನ್ನ ರಾಶಿ ಯಾವುದೆಂದು ತಿಳಿದುಕೋ. ಸರಿಯಾಗಿ ತಿಳಿದುಕೊಂಡರೆ ನಿನಗೆ ಒಳ್ಳೆಯದಾಗುತ್ತದೆ. ನನಗೂ ಶಾಪ ವಿಮೋಚನೆಯಾಗುತ್ತದೆ. ನಿನ್ನದಲ್ಲದ ರಾಶಿಯನ್ನು ಆರಿಸಿ ಹೇಳಿದರೆ ನಿನ್ನನ್ನು ಒಂದು ಮುಷ್ಟಿ ಬೂದಿಯಾಗಿ ಮಾಡಿ, ನನ್ನನ್ನು ಕಾಪಾಡಲು ಇನ್ನೊಬ್ಬನು ಬರುವವರೆಗೂ ನಾನು ಹೀಗೆಯೇ ಇರಬೇಕಾಗುತ್ತದೆ. ನನಗೆ ಶಾಪ ವಿಮೋಚನೆಯಾಗಿ ಬಿಟ್ಟರೆ ಈ ರಾಶಿಗಳಲ್ಲಿ ಒಂದು ನಿನ್ನದು. ಎರಡನೆಯದು ಜನರದು. ಮೂರನೆಯದು ನನ್ನಿಂದ ಸತ್ತವರ ಹೆಂಡಿರು ಮಕ್ಕಳದು. ಗೊತ್ತಾಯಿತೇನು?" ಎಂದು ಹೇಳಿದನು. ಸತ್ಯಪಾಲನು ಒಂದು ರಾಶಿಯನ್ನು ಮುಟ್ಟಿದ ಕೂಡಲೇ ಗುಡಿಸಲಿನೊಳಗೆ ದೊಡ್ಡದೊಂದು ಪ್ರಕಾಶವು ಬೆಳಗಿತು. ಭೂತನು ಮಾಯವಾಗಿ ಅದರ ಸ್ಥಾನದಲ್ಲಿ ಯಾವನೋ ಗಂಧರ್ವನಂಥವನು ನಿಂತಿರುವುದು ಕಂಡಿತು. ಅವನು ಸತ್ಯಪಾಲನೊಂದಿಗೆ, "ನಿನ್ನ ಪುಣ್ಯದಿಂದ ನನಗೆ ಶಾಪ ವಿಮೋಚನೆಯಾಯಿತು. ನಾನು ನನ್ನ ಲೋಕಕ್ಕೆ ಹೋಗುತ್ತೇನೆ. ಇನ್ನು ಈ ಬೆಟ್ಟವೂ, ಇಲ್ಲಿರುವ ಪಶುಗಳೂ, ಬಂಗಾರದ ನಾಣ್ಯಗಳೂ ಎಲ್ಲಾ ನಿನ್ನದೇ" ಎಂದು ಹೇಳಿ ಮಾಯವಾಗಿ ಹೋದನು.

ಭೂತದ ಬೆಟ್ಟದಿಂದ ಸತ್ಯಪಾಲನು ಸಜೀವಿಯಾಗಿ ತಿರುಗಿ ಬಂದುದನ್ನು ನೋಡಿ ಉಳಿದ ದನಗಾಹಿಗಳಿಗೆಲ್ಲಾ ಅತ್ಯಾಶ್ಚರ್ಯವಾಯಿತು. ಅವನು ಅವರೊಂದಿಗೆ ಬೆಟ್ಟದ ಮೇಲೆ ನಡೆದ ಸಂಗತಿಯನ್ನೆಲ್ಲಾ ಹೇಳಿದನು.

ಸತ್ಯಪಾಲನು ಅಂದಿನಿಂದ ಭೂತದ ಬೆಟ್ಟದಲ್ಲಿ ನಿವಾಸ ಏರ್ಪಡಿಸಿಕೊಂಡು ತನ್ನ ಪಾಲಿನ ಬಂಗಾರದಿಂದ ಸುಖವಾಗಿ ಜೀವಿಸಿದನು. ಉಳಿದುವನ್ನು ಹಂಚಬೇಕಾದ ರೀತಿಯಲ್ಲಿ ಹಂಚಿದನು. ಕ್ರಮವಾಗಿ ಆ ಬೆಟ್ಟಕ್ಕೆ ಭೂತದ ಬೆಟ್ಟವೆಂಬ ಹೆಸರು ಹೋಗಿ, ಸತ್ಯಪಾಲಾದ್ರಿ ಎಂಬ ಹೆಸರು ಬಂತು.



# ಚಂದಮಾಮ

## ವಿಜ್ಞಾನ ವಿನೋದಗಳನ್ನು ಪಸರಿಸುವ ಮಾಸಪತ್ರಿಕೆ

* ಚಂದಮಾಮ ನಮ್ಮ ಪುರಾಣಗಳ ಸಾಹಿತ್ಯ ರತ್ನಗಳನ್ನು ಕ್ರಮ ಪದ್ಧತಿಯಲ್ಲಿ ಒಪ್ಪಿಸುತ್ತದೆ.
* ವಿಶಾಲದೃಷ್ಟಿಯಿಂದ ಪ್ರಪಂಚ ಸಾಹಿತ್ಯದೊಳಗಿನ ಅದ್ಭುತ ಕಾವ್ಯಗಾಥೆಗಳನ್ನು ಸುಲಭ ಭಾಷೆಯಲ್ಲಿ ತಿಳಿಯಪಡಿಸುತ್ತದೆ.
* ಮೃದುಹಾಸ್ಯ, ವಿಜ್ಞಾನ ವಿನೋದಾತ್ಮಕವಾದ ಒಳ್ಳೆಯ ಕಥೆಗಳಿಂದ ಓದುಗರನ್ನು ಆಕರ್ಷಿಸಿಕೊಳ್ಳುತ್ತದೆ.
* ನಮ್ಮ ಪುರಾಣ ಗಾಥಾವಳಿಯನ್ನು ಸಾಧಿಕಾರವಾಗಿ ಒಪ್ಪಿಸುತ್ತದೆ.
* ವಿನೋದಾತ್ಮಕವಾದ ಹರಟೆಗಳಿಂದ, ಲೋಕಜ್ಞಾನ ಹುಟ್ಟಿಸುವ ಶೀರ್ಷಿಕೆಗಳಿಂದ ಓದುಗರನ್ನು ರಂಜಿಸುವಂತಹುದು ಚಂದಮಾಮ.
* ಚಂದಮಾಮ ನಿಮ್ಮ ಜೀವಿತದಲ್ಲಿ ಮಾತ್ರವಲ್ಲ, ನಿಮ್ಮ ಬಂಧುಮಿತ್ರರ ಜೀವನಗಳಲ್ಲಿಯೂ ನಿರ್ಮಾಣಾತ್ಮಕವಾದ ಪಾತ್ರವಹಿಸುವಂತಹುದು. ನಿಮ್ಮ ಪ್ರಿಯ ಮಿತ್ರರಿಗೆ ಚಂದಮಾಮ ವನ್ನು ಬಹುಮಾನವಾಗಿ ಕೊಡಿರಿ.

**ಬಾಲರಿಗಾಗಿ ಉದ್ದೇಶಿಸಲ್ಪಟ್ಟ ಚಂದಮಾಮವು, ಪಾಠಕರು ನವತಾರುಣ್ಯ ಭಾವಗಳಲ್ಲಿ ಬೆಳಗಲು ಸಹಾಯ ಮಾಡುತ್ತದೆ.**

ಈ ಹದಿಮೂರು ಭಾಷೆಗಳಲ್ಲಿ ಯಾವ ಭಾಷೆಯಲ್ಲಾದರೂ ಚಂದಮಾಮದ ಚಂದಾದಾರರಾಗಿ ಸೇರಿರಿ.

**ಕನ್ನಡ, ತೆಲುಗು, ತಮಿಳು, ಹಿಂದೀ, ಇಂಗ್ಲೀಷ್, ಅಸ್ಸಾಮಿಯಾ, ಬೆಂಗಾಲೀ, ಮರಾಠೀ, ಗುಜರಾಥೀ, ಮಲೆಯಾಳ, ಒರಿಯಾ, ಪಂಜಾಬೀ, ಸಂಸ್ಕೃತ.**

**ವಾರ್ಷಿಕ ಚಂದಾ: ರೂ. ೩೦-೦೦**

ಯಾವ ಭಾಷೆಯ ಚಂದಮಾಮ ಬೇಕೆಂದು ತಿಳಿಯಪಡಿಸಬೇಕಾದ ವಿಳಾಸ:

**ಡಾಲ್ಟನ್ ಏಜೆನ್ಸೀಸ್**

ಚಂದಮಾಮ ಬಿಲ್ಡಿಂಗ್ಸ್

ವಡಪಳನಿ, ಮದರಾಸು — ೬೦೦ ೦೨೬

## ಫೋಟೋ ಶೀರ್ಷಿಕೆಯ ಸ್ಪರ್ಧೆ : : ಬಹುಮಾನ ರೂ. ೫೦

ಗೆದ್ದ ಶೀರ್ಷಿಕೆಗಳು ೧೯೮೬ ಮಾರ್ಚ್ ಸಂಚಿಕೆಯಲ್ಲಿ ಪ್ರಕಟವಾಗುತ್ತವೆ.





Mrs. V. Rajamani

Pranlal K. Patel

★ ಮೇಲಿನ ಫೋಟೋಗಳಿಗೆ ಸರಿಹೊಂದುವಂತೆ ಒಂದು ವಾಕ್ಯದಲ್ಲಾಗಲೀ, ಸಂಬಂಧಿಸಿದಂತಿರುವ ಎರಡು ವಾಕ್ಯಗಳಲ್ಲಾಗಲೀ ಶೀರ್ಷಿಕೆ ಬರೆಯಬೇಕು. ★ ಜನವರಿ ೧೦ ರೊಳಗೆ ಶೀರ್ಷಿಕೆಗಳು ನಮಗೆ ತಲಪಬೇಕು. ಆಮೇಲೆ ಬಂದ ಶೀರ್ಷಿಕೆಗಳು ಪರಿಶೀಲಿಸಲ್ಪಡುವುದಿಲ್ಲ. ★ ಶೀರ್ಷಿಕೆಗಳಲ್ಲಿ ಅತ್ಯುತ್ತಮವೆಂದು ನಾವು ನಿರ್ಧರಿಸುವ ಒಂದು ಜತೆಗೆ ರೂ. ೫೦ ಬಹುಮಾನ. ★ ಶೀರ್ಷಿಕೆಗಳನ್ನು ಪೋಸ್ಟ್ ಕಾರ್ಡಿನಲ್ಲೇ ಬರೆಯಬೇಕು. ಅದರಲ್ಲಿ ಬೇರೆ ವಿಷಯ ಬರೆಯಬಾರದು.

ವಿಳಾಸ : ಚಂದಮಾಮ ಫೋಟೋ ಶೀರ್ಷಿಕೆಯ ಸ್ಪರ್ಧೆ, ಮದರಾಸು-೬೦೦ ೦೨೬

---

### ನವೆಂಬರ್ ಸ್ಪರ್ಧೆಯ ಫಲಿತಾಂಶ :

ಮೊದಲನೇ ಫೋಟೋ : ಅಮರ ವೀರೆಯ ಸ್ಮಾರಕ

ಎರಡನೇ ಫೋಟೋ : ಅಭ್ಯಾಸದ ಧೀರ ಸಾಧಕ

ಕಳುಹಿಸಿದವರು : ಪ್ರಸನ್ನ ಕೆ., ನಂ. ೪-ಮಹಾತ್ಮಾ ಗಾಂಧೀ ರೋಡ್, ಮಂಗಳೂರು.

ಬಹುಮಾನ ರೂ. ೫೦/- ಈ ತಿಂಗಳ ಆಖೈರಿನೊಳಗೆ ಕಳುಹಿಸಲಾಗುವುದು

### ನಿಮಗೆ ಗೊತ್ತೇ ? ಉತ್ತರಗಳು :

೧. ಜಪಾನಿನ ಕಮಮೂರಾದಲ್ಲಿ ೨. ಶ್ರೀಲಂಕೆಯ ಕಂಡೀಯಲ್ಲಿ ೩. ಗೆಲೀಲಿಯೋ ೪. ಗುಲಾಮ ವ್ಯಾಪಾರದ ನಿಷೇಧಕ್ಕೆ ಕೆಲಸ ಮಾಡಿದನು ೫. ಪಲಿಪ್ಪೈನ್ಸ್.

Printed by B.V. REDDI at Prasad Process Private Ltd., 188 N.S.K. Salai, Madras 600 026 (India) and Published by B. VISWANATHA REDDI on behalf of CHANDAMAMA PUBLICATIONS, Chandamama Buildings, Vadapalani, Madras 600 026 (India). Controlling Editor: NAGI REDDI.